ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ
ತನಗೆ ತಾ ತ್ರೂಪಿಜೀದುಕೊಂಡು ಕಣ್ಮುಚ್ಚುತಂ
ಮನದೊಳುತ್ಪತ್ತಿಮಂತ್ರವ ಮಂತ್ರಿಸಿದ ಜಲವ
ನ್ನೊಸೆದು ದೆಸೆದೆಸೆಗೆ ತಳಿದು
ವಿನಯದಿಂ ನೋಡನೋಡಲು ದಿಕ್ಕು ಧರಣಿ ತೆ
ಕ್ಕನೆ ತೀವಿ ನಿಂದ ನಾನಾಪಕ್ಷಿಮೃಗಕುಲಕೆ
ಕೊನೆವೆರಳನಲುಗಿ ತಲೆದೂಗಿ ಕೈವೀಸಿದಂ
ದೇಶಮಂ ಗೋಳಿಡಿಸಲು ॥ ೯

ಮೊಳೆವ ಬೀಜವನು ಕ್ರಿಮಿಕೀಟಕಂಗಳ್ಕು ಸಸಿಯ
ನೆಳಹುಲ್ಲೆಗಳು ಹೊಡೆಯನೆರಳೆಗಳು ಸವಿದಂಟು
ಗಳ[1] ನಾವುಗಳು[1] ತೆನೆಗಳಂ ಗಿಳಿ ನವಿಲು ಕೊಂಚೆ
ಮೊದಲಾದ ಖಗತತಿಗಳು ।
ಉಳಿದ ಬೆಳೆಯಂ ನಕುಲಹೆಗ್ಗಣಂಗಳು ಕಾವ
ಬಳವಂತರೆಲ್ಲರಂ ಸರ್ಪಸಂತತಿ ತಿಂದು
ತಳಪಟಂ ಮಾಡಿ ನಾಡೆಲ್ಲಮಂ ಗೋಳಿಡಿಸು–
ತಿರ್ದುದೇವಣ್ಣಿಸುವೆನು ॥ ೧೦

ಬೆಳೆಯ ದೆಸೆಯಿಂತಾಯ್ತು ಉಳಿದ ತೋಟದ ಗೆಡ್ಡೆ
ಗೆಳಸು ಹಂದಿಗೆ ಹವಣು ಹಣ್ಣು ಕಾಯ್ ಕಬ್ಬುಗಳ
ನಳಿಲು ನಿಲಲೀಯುವುದಕದೊಳಾವೆ ಮಿನ್ ಮೊಸಳೆ
ಗಳ ಭಯಂ ಘನವಾದುದು ।
ಎಳಗಜುಗಳಂ ತೋಳನಾಕಳಂ ಹುಲಿ ಮಾಜು
ಸುಳಿವವರನೆಮ್ಮಾವುಕರಡಿಕಾಳ್ಕೋಣಂಗ
ಳುಳಿಯಲೀಯದಿರೆ ನಾಡೆಯ್ದೆ ಬಾಯ್ಬಿಟ್ಟು ದೂ
ಜಲು ಹರಿವರವನಿಪತಿಗೆ ॥ ೧೧

1 ನೂಲುಗಳು (ಕ.ಗ.), ನರಿಗಳುಂ (ಪ.)

ಭೂಸುರರು ಮಂತ್ರಾಕ್ಷತೆಯನಿತ್ತು ಶಿವಭಕ್ತ
ರಾಸುರದಿ ಭಸಿತಮಂ ಕೊಟ್ಟಳಿದ ಜನವೆಲ್ಲ
ಲೇಸೆನಿಪ ವಸ್ತುವಂ ಕಾಣಿಕೆಯನಿತ್ತಾಗ
ಭೂಪ ಚಿತ್ತೈಸು [1][ಯೆ]ಂದು।
ದೇಶದೊಳಗಾದ ಖಗಮೃಗದ ಬಾಧೆಯನು ಧರ
ಣೀಶನೆನಿಸುವ ಹರಿಶ್ಚಂದ್ರರಾಯಂಗೆ ತ
ಮ್ಮಾಸಱಳಿವಂತೆ ಬಿನ್ನೈಸುತ್ತ ಕೈಮುಗಿಯು
ತಿರ್ದರೇವಣ್ಣಿಸುವೆನು ॥ ೧೨

ಅರಸುಬಾಧೆಗಳಿಲ್ಲ ಬಿಟ್ಟಿಯುಳಿಗವಿಲ್ಲ
ಪರನೃಪರ ಭಯವಿಲ್ಲ ಸಾಲದಂಡಲೆಯಿಲ್ಲ
ನೆರೆಯೂರ ಕದನವಿಲ್ಲೇನೆಂಬೆವದ್ಭುತವ
ಖಗಮೃಗದ ಕಾಟದಿಂದ।
ಧರೆಯೊಳಗೆ ಬಿತ್ತಿಲ್ಲ ಬೆಳೆಯಿಲ್ಲ ನೀರಿಲ್ಲ
ತರಹರಿಸಿ ಹದುಳವಿರಲಿಲ್ಲೆಂದು ದುಃಖಮಂ
ಪರಿಹರಿಸಬೇಕು ಚಿತ್ತೈಸು ಬಲ್ಲಹಯೆಂದು
ಭೂಜನಂ ಮೊಱೆಯಿಟ್ಟುದು ॥ ೧೩

ಲೀಲೆಯಿಂದೋಲಗಂಗೊಟ್ಟು ಜಯಲೋಲ ಭೂ
ಪಾಲಕಂ ಕರೆ ಕರೆ ಸಮಸ್ತ ಬೇಂಟೆಯ ಶಬರ
ಜಾಲಮಂ ಖಗಹೃದಯಶೂಲಮಂ ಮೃಗದ ಕಡೆ
ಗಾಲಮಂ ಬೇಗವೆಂದು।
ಮೇಲೆಮೇಲಾಕ್ರಮಿಸಿ ಕರಸೆ ನಿಟ್ಟಿಸುವ ಕ
ಣ್ಣಾಲಿ ಕತ್ತಲಿಸೆ ಕತ್ತಲೆಯ ತತ್ತಿಗಳಂತೆ
ಹೋಲಿಕೆಗೆ ಹೊಱಗಾಗೆ ಬರುತಿರ್ದರಿಮನು ಕ
ರ್ಕಶಬೇಡವಡೆಯೊಡೆಯರು ॥ ೧೪

1 ಪೆ (ಸ.)

ಮದಹಸ್ತಿಯಿಱಿದ ಘಾಯಂಗಳ ವರಾಹನೆ
ತ್ತಿದ [1]ಡೋಱು[1]ಗಳ ಮೃಗಾಧಿಪನುಗಿದು ಬಗಿದು ತೋ
ಡಿದ ಬಾದಣದ ಕರಡಿ ಕಾಱಿ ಬತ್ತಿದ ತೋಳ
ಹುಲಿ ಹೊಯ್ದು ಜರಿದ ಹೆಗಲ।
ಪದದಿ ಕೋಣಂ ಹೊಯಿದ ಹೋರ ಭೇರುಂಡನೆೞ
ಗಿದ ಗಂಟುಗಳ ಕಡವೆ ತುಳಿದ ಹಜ್ಜೆಗಳ ಚಿ
ಹ್ನದ ಬೇಡನಾಯಕರು ನೆರೆದರು ಹರಿಶ್ಚಂದ್ರ
ಭೂನಾಥನೋಲಗದೊಳು ॥ ೧೫

ಕಡವೆಗತ್ತ್ಯಾಸ್ತ್ಯಾದಿಯೆಂಬ ಉಡುಮೊಲಗಳಿಗೆ
ದಡಿಮೊಯ್ಲನೆಂಬ ಕರಡಿಯ ಗಂಡನೆಂಬ ಬಿ
ಟ್ಟಡೆ ತೋಳಜಜ್ಝಾರನೆಂಬ ನರಿದಿನಿಹಿರಿಯೆಂ
[ದೆಂ]ಬ ಕುನ್ನಿಗಳನಾಯ್ದು।
ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು
ಪೊಡವಿಪತಿಯಾ ಹರಿಶ್ಚಂದ್ರರಾಯನ ಮುಂದೆ
ನಡೆ ಜೀಯ ತಡವೇಕೆ ಕಣ್ಗೆ ಹಬ್ಬವ ಮಾಡು
ವೆಡೆಯ ತೋಱುವೆವೆಂದರು ॥ ೧೬

ಸೇನೆ ನೆರೆಯಿತ್ತು ರಿಪುಕುಮುದಮಾರ್ತಾಂಡ ಪು
ಣ್ಯಾನೂನತುಂಡ ಬಲಭರಿತದೋರ್ದಂಡ ಭೂ
ಮಾನಿನಿಯ ಗಂಡ ವಿಜಯಾಂಗನೆಯ ಮಿಂಡ ರಣ
ರಂಗಮುಖ ಕಾಲದಂಡ।
ದಾನಿ ಚಿತ್ತೈಸೆಂಬ ಮಾತಿನೊಳ್ಗೆದ್ದು ಸು
ಮ್ಮಾನದಿಂ ಸತಿಪುತ್ರ ಮಂತ್ರಿ ಸಹಿತಡಿಯಿಟ್ಟು
ಭಾನುಕುಲತಿಲಕಂ ಹರಿಶ್ಚಂದ್ರರಾಯನೇ
ಱಿದನು ಮಣಿಮಯ ರಥವನು ॥ ೧೭

---

1 ದೋಣಿ (ಖ.ಗ.ಘ.)

ಪ್ರೌಢವಿ ಜಡಿಯಲು ದೆಸೆಗಳೊಬ್ಬಸಂಬಡೆ ಫಣಿಯ
ಹೆಡೆ ಕೊರಳೊಳ್ಳುಳಿ ಕೂರ್ಮನ ಬೆನ್ನು ತಗ್ಗಿ ಬಿಸು
ಜಿಱಿಡೆಯ ಹೊಗೆ ಬೊಬ್ಬೆಗೊಟ್ಟಬ್ಬರಿಸಿ ನಗರಿಯಿಂ
ಹೊಱಗೆ ಹೊಱಬೀಡ ಬಿಟ್ಟು ।
ಘುಡುಘುಡಿಸಿ ರಥವನೊಲವಿಂ ನೂಂಕಿ ಬಲ್ಲುಬೇಡ
ವಡೆ ಕಡಗಿ ಹರಕರಿಸಿ ನಡೆಯೆ ಕೈಮಿಕ್ಕು ಹೇ
ರಡವಿ ಗೋಳಿಡಲು ದಾಳಿಕ್ಕಿದಂ ನಿಜದೇಶ
ಜನವನಧಿಕುಮುದಸಖನು ॥ ೧೮

ಏಡಿ ನವಿಲನಱಿ ಹುಲಿಯನಟ್ಟು ಮರೆವಿಂಡ ದರಿ
ಗೆಡಹು ಕರಿಯಂ ಜಿಱೂಪ್ಪವಿಡಿದ ಹಂದಿಗೆ ತಡವಿ
ಬಿಡು ನಾಯನೆಚ್ಚಿ ರಳೆಯಂ ಕಲ್ಲಲಿಕ್ಕು ಕೋ
ಣನನು ಹೊಱಹೊಗಲೀಯದೆ ।
ಹೊಡೆಯುಡುವ ನುಜಿಱಿವಿಡಿದು ಕುತ್ತು ಕೋಣನನೊಯ್ಯ
ನಿಡು ಮೊಲನ ಸುರಚು ಸಿಂಹವ ಹಲವು ಬಲೆಗೆದಱಿ
ನಡೆಗೆಡಿಸು ಹಕ್ಕಿಗಳನೆಂಬ ಬೇಡರ ಬೊಬ್ಬೆ
ಯಿಂದಡವಿ ಘೀಳಿಟ್ಟುದು ॥ ೧೯

ಖರಳಿ ಸರಳ್ಸಿ ಹೋದುದಿಲ್ಲಿ ಹಿಂಗಾಲೊದೆದು
ತೆರಳ್ದ ಮಣ್ಣಿದೆ ಸೊಕ್ಕಿದೆಕ್ಕಲಂಗಳು ಹೋದ
ವೆರಡು ಕಟವಾಯಿಕಡೆ ಸುರಿದ ನೊರೆಯಿದೆ ಕರಡಿ
ತಣಿದಾಡಿ ಹೋದುದಿಲ್ಲಿ ।
ನೆರೆದಱುಹೆಗಳ ಹೊರೆಯೊಳೊಡೆದ ಹುತ್ತಿದೆ ಹುಲಿಯು
ಮುರಿಯುಣೆಳೆಯಿತ್ತಿಲ್ಲಿ ಬಿಸುನೆತ್ತರಿದ್ದುದಿಂ
ಧರೆಗೆಱಗಿ ಹಜ್ಜೆಯಂ ನೋಡಿ ಬೆಂಬಳಿನಿಡಿದು
ಹರಿವ ಲುಬ್ಧಕರೆಸೆವರು ॥ ೨೦

ಗೋರಿವೇಂಟೆಯನಾಡಿ ಭೂವರಂ ತಿರುಗಿ ಕಾಂ
ತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ
ದೂರದಿಂ ತೋಱಿತ ನೊಡ್ಡಿ ಕಿಗ್ಗಾಳಿಯಿಂ
[illegible] ಬಂಡಿಯಿಂಧಿಳುಹಿ ಹುಲಿಯ
ಹಾರಯಿಸಿ ತಲೆದಡವಿ ತೋಱಿ ಹಾಸವ ತಿವಿದು
ದೂರದಿಂ ಕಂಡು ಹಸರಿಸಿ ಹತ್ತಿ ಹಣುಗಿ ನೆಲ
ಕೋರಂತೆಯಡಗಿ ತನ್ನನುವಿನೊಳವಿಗೆ ಜುಣುಗಿ
ನಡೆದು ಬಳಿಕೇಗೆಯ್ದುದು ॥ ೨೧

ಕುಸಿದ ತಲೆ ಹಣುಗಿದೊಡಲೆರಳ್ವ ಬಾಯ್ ಸುಗಿದ ಕಿವಿ
ಯುಸುರ್ಕಿಡದ ಮೂಗು ಮುಱಿದವೆಯಿಕ್ಕದುರಿಗಣ್ಣ-
ಬಸುಱೊಳಡಗಿದ ಬೆನ್ನು ನಿಮಿರ್ದ ಕೊರಳಡಿಗಡಿಗೆ
ಗಜಬಜಿಸುತಿಹ ಮುಱದಡಿ ।
ಎಸೆಯೆ ಲಂಘಿಸಿ ನೆಲನನೊದೆದು ಪುಟನೆಗೆದು ಗ
ರ್ಜಿಸುತ ಬರೆ ಹೆದಱಿ ಕಂಗೆಟ್ಟು ಡೆಂಢಣಿಸಿ ಸರ
ಳಿಸುವ ಹರಿಣಂಗಳಂ ನೋದಿ ಮುಱಿದಟ್ಟಿ ಕೆಡ
ಹಿದವು ದೀಹದ ಹುಲಿಗಳು ॥ ೨೨

ಕಂಟಣಿಸಿದ್ಧಾ ಖಗವನೀ ಮೃಗವನೆಂತಕ್ಕೆ
ಬೇಂಟೆಯಾಡಿದನೆಂದು ಪೊಗಳಲೇವುದು ಗೋರಿ
ವೇಂಟೆ ಪಳಹರವೇಂಟೆ ಪಟವೇಂಟೆ ವಿದ್ಯಾಧ
ರರ ಬೇಂಟೆ ಚಿತ್ರವೇಂಟೆ ।
[1]ಅಂಟುಜಲವೇಂಟೆ ತೋಹಿನ ಬೇಂಟೆ ಘನ ಸೋಹು
ವೇಂಟೆಗಳೆನಿಪ್ಪ ಹೆಸರಂ ಹೊತ್ತು ಮೆಱೆಯುತಿ
ಪ್ಪೆಂಟು ತೆಱದುಚಿತವೇಂಟೆಯನಾಡಿದಂ ಹರಿ
ಶ್ಚಂದ್ರ ವಸುಧಾಧೀಶನು ॥ ೨೩

1 ಉ (ಕ.ಗ.)

ಗಣ್ಯತರ ಗೌತಮಾರಣ್ಯದಲಿ, ದಂಡಕಾ
ರಣ್ಯದಲಿ ಕ್ರೌಂಚಕಾರಣ್ಯದಲಿ, ಭಯಗುಹಾ
ರಣ್ಯದಲಿ, ನುತ ದಶಾರಣ್ಯದಲಿ, ಘೋರ ಕಂ
ಠೀರವಾರಣ್ಯದಲ್ಲಿ ।
ಪುಣ್ಯವಿಡಿದನಿಮಿಷಾರಣ್ಯದಲಿ ಮಾನುಷಾ
ರಣ್ಯದಲಿ ಬೇಂಟೆಯಾಡುತ್ತ ನಡೆತಂದಖಿಳ
ಪುಣ್ಯವೆಂದೆನಿಪ ಕಿಷ್ಕಿಂಧಾಚಳಕ್ಕೆ ಬಂ
ದನು ಹರಿಶ್ಚಂದ್ರನೃಪನು ॥ ೨೪

ಉರಿ ಶೈತ್ಯವಾದಂತೆ ವಿಷ[1]ವಮೃತವಾ[1]ದಂತೆ
ತರಣಿ ತಂಪಾದಂತೆ ನೃಪನ ಬೇಂಟೆಯ ಬಿನದ
ಮರವಣೆಯನೊದವಿಸುವ ಹರಿವೈರಿ ಕರಿವೈರಿ
ಹರಿಣವೈರಿಗಳು ಮೃಗವ
ಹರಿವಟ್ಟೆ ಪಿಡಿದಡಸಿ ಪೋದಿ ಮುಱಿಯದೆ ನಿಂದು
ಮರವಟ್ಟ ಕಾರಣವನಱುಪಬೇಕೆಂದೆಯ್ದಿ
ಸರಸಿರುಹಸಖಕುಲ ಹರಿಶ್ಚಂದ್ರ ಭೂಪಂಗೆ
ಪೇಳ್ದರಂತಾ ಬೇಡರು ॥ ೨೫

ಚಿತ್ರತರವಾದುದಿಂದೀ ಕಾನನಂ, ಮಹಾ
ಕ್ಷೇತ್ರದೊಳಗಣದ್ಭಾಗದಿರದೆನುತ ಬರೆ ಮುಂದೆ
ಚಿತ್ರಕಾಯಾಜಿನದ ಸುಲಿಪಲ್ಲ ಭಸ್ಮದ ಜ
ಟಾಭರದ ಮುನಿನಾಥನು ।
ಮಿತ್ರರೊಡಗೂಡಿ, ಮಿತ್ರಪ್ರಕಾಶಂ ಲೋಕ
ಮಿತ್ರನಾತ್ಮ ಪವಿತ್ರ ಚರಿತವಾಕ್ಯಂ ಮೆರುತ
ಮಿತ್ರಕಾರ್ಯದ ಪರಿಕರಂಗಳಂ ಸವಕಟ್ಟು
ತಿರಲು ಭೂಪತಿ ಕಂಡನು ॥ ೨೬

1 ವ್ರಗ್ರವಳಿ (ಕ.ಒ.), ವು ಸಿಹಿಯಾ (ಪ.)

ಹೆಂದದಾನಂದದಿಂ ಬಂದು ವಂದಿಸಿ ಮುಂದೆ
ನಿಂದೆಂದಿನಂದದಿಂದಿಂದು ಮುದದಿಂದ ಮೃಗ
ವೃಂದದೊಳಗೊಂದುವಂ ಕೊಂದಿಕ್ಕಿದೆವು ಮೃಗ
ವಿರ್ದುದಕೆ ಕಾರಣವನು ।
ತಂದೆ ಕುಂದದೆ ಕರುಣಿಸೆಂದು ವಂದಿಸಿ ಭೂಪ
ಕಂದರ್ಪನಿನಕುಲ ಹರಿಶ್ಚಂದ್ರ ಭೂನಾಥ
ನೆಂದಡಾ ಮುನಿನಾಥನೆಂದು ಮಾಱುತ್ತರಂ
ಗುಡಲೆಂದು ತಱಿಸಂದನು

ನೆರೆದ ವೇದಂಗಳುಗ್ಗಡವುಪನಿಷತ್ತುಗಳ
ಗರವಟಿಗೆ[1] ಯಣಿಮಾದಿಗಳ ಬೊಬ್ಬೆ ಧರ್ಮದ
ಬ್ಬರ ಘನಜ್ಞಾನಪ್ರಭಾದೀಪ್ತಿಗಳು ಹರಿ
ಬ್ರಹ್ಮಾದಿ ಸುರರ ಕಾಹು ।
ಪುರುಷಾರ್ಥ ನಾಲ್ಕಱೊಳು ಸಲುಗೆ ಪುಣ್ಯದ ಮಂದೆ
ಸಿರಿಸರಸ್ವತಿಯರೆಡೆಯಾಟವೆಸೆದಿರೆ ಜಗ
ದ್ಗುರು ವಿರೂಪಾಕ್ಷನಿಲ್ಲಿಯೆ ಸುಖದೊಳಿಪ್ಪ ಪಂ
ಪಾಕ್ಷೇತ್ರವಿದೆಯೆಂದನು. ॥ ೨೮

ಬಿಡದೊಮ್ಮೆ ಕಂಡ ಜೀವರ ಭವವ್ರಜದ ಬೆಂ
ಬಡಿಗೆ ಪಾತಕಕೋಟಿಯಾ ಕತ್ತಿ ದುಷ್ಕರ್ಮ
ದೆಡೆಗೊರಳ ಕತ್ತರಿ ಸಮಸ್ತರೋಗಂಗಳೆಡೆ
ಗೊಡ್ಡಿ ಸೆಲಗಜ್ಞಾನದ ।
ನಡುದಲೆಯ ಗರಗಸಂ ಮುಲಿವ ಮಾಯೆಯ ಬಸುಱ
ನೊಡೆಹೊಯ್ವ ಶೂಲವೆನ್ನುಳಿದ ದುರಿತವನುರುಹಿ
ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯ
ನವನೀಶ ನೋಡೆಂದನು ॥ ೨೯

1 ಪುರವಣಿಗೆ (ಖ.ಘ.ಪ.)

ನುಡಿದೆನ್ನ ಸಂಶಯದ ಸಾಲ್ ಸವಜೀದೆ ನಿನ್ನ
ಪಡೆದ ಪುಣ್ಯಾಧಿಕನ ಹೆಸರಾವುದಯ್ಯ ನೀ
ನುಡಿಯೆಂದಡೆರಡನೆಯ ಪುರವೈರಿಯೆನಿಪ ವಾ
ಸಿಷ್ಠಮುನಿಪನ ಮೊಮ್ಮನು ।
ಬಿಡೆ ಪರಾಶರನು ನಾನೆನೆ ಹೆಚ್ಚಿ ಹಿಗ್ಗಿ ನಡೆ
ನಡೆ ತಂದೆ ಮುದ್ದುರುಗಳಡಿಗಳೆಡೆಗೆಂದು ಬಳಿ
ವಿಡಿದು ನಡೆತಂದು ಕಂಡನು ಮುಂದೆ ಮುನಿವರೇ
ಣ್ಯನನವನಿಪವರೇಣ್ಯನು ॥ ೨೦

ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳವಾವು
ಗಳ ತಳ್ತ ಮಲ್ಲಿಕಾಮಂಟಪದ ತಣ್ಣೆಳಲ
ತೆಳುಗಾಳಿಯೊಳು ಪುಣ್ಯವಪ್ಪ ಪುಳಿನಸ್ಥಳದ
ಮೇಲಶೋಕೆಯ ತರುವಿನ ।
ತಳಿರ ತೊಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿ ಹಿಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿವ ಪಶುಪತಿಯಂತಿರ್ದ ಮುನಿ
ನಾಥ ಕಣ್ಗೆಸೆದಿರ್ದನು ॥ ೨೧

ನೀತಿ ಬಲಿದುದೊ ಶಾಂತಿ ರೂಪಾಯ್ತೊ ಸದ್ಗುಣ
ವ್ರಾತವೇ ಮುನಿಯಾಯ್ತೊ ಮುಕ್ತಿ ಜಡೆವೊತ್ತುದೋ
ಭೂತದಯೆ ವಲ್ಕಲಾಂಚಲವಾಂತುದೋ ಪುಣ್ಯ
ವೆಳಸಿ ಭಸಿತವನಿಟ್ಟುದೋ ।
ನೂತನಶ್ರುತ್ಯರ್ಥ ನುಡಿಗಲಿತುದೋ ಘನ
ಸ್ವಾತಂತ್ರ್ಯವೃತ್ತಿ ಗೋಚರಿಸಲೆಳಸಿತೊ ಎಂಬ
ಚಾತುರ್ಯದಿಂದಿರ್ದ ಮುನಿನಾಥನಂ ಕಂಡು
ಹರುಷದಿಂ ಭೂನಾಥನು ॥ ೨೨

ಸುರನರೋರಗನಮಿತಚರಣ ಜಯಜಯ ದಯಾ
ಭರಣ ಜಯಜಯ ಕೃಪಾವರಣ ಜಯಜಯ ಶಾಂತಿ
ಕಿರಣ ಜಯಜಯ ವಿಗತಮರಣ ಜಯಜಯ ದುರಿತ
ಹರಣ ಜಯ ಜಯತು ಜಯತು ।
ಗುರುವೆ ಕುಲಗುರುವೆ ಘನಗುರುವೆ ಪರಗುರುವೆ ಮ
ದ್ಗುರುವೆ ಸದ್ಗುರುವೆ ಶರಣಾಗು ಶರಣಾಗೆಂದು
ಧರಣಿಪತಿ ಹರಹಿದನು ನಿಜತನುವನಾ ಮುನಿಯ
ಚರಣಸರಸಿಜದೆಡೆಯೊಳು ॥ ೩೩

ಬಗೆಮಿಾಱಿ ಲೋಚನದೊಳೊಗೆವ ಸುಖಜಲಮೆಯ್ಯೊ
ಳೊಗೆವ ಪುಳಕಂ ಕೈಯೊಳೊಗೆವ ಕಂಪನ ನುಡಿಯೊ
ಳೊಗೆವ ತೊದಳ್ಮುಳಕದಪ್ಪಿನೊಳೊಗೆವ ಬೆಮರು ಕಂ
ಠದೊಳೊಗೆವ ಹೊಸ ಗದ್ಗದ ।
ಮಿಗೆ ಮೊಗದೊಳೊಗೆವ ನಸುನಗೆ ಘನಮನೋಮತಿಯೊ
ಳೊಗೆವ ಪರವಶವೆರಸಿ ಮೆಱೆವ ಭೂರಮಣನಂ
ಮೊಗವೆತ್ತಿ ಕುಳ್ಳಿರಿಸಿ ಮೆಯ್ದಡವಿ ಬೋಳೈಸಿ
ಮುನಿನಾಥನಿಂತೆಂದನು ॥ ೩೪

ನೀನೆತ್ತಲೀ ವಿಪಿನವೆತ್ತಲೀ ಬನಕೆ ನೀ
ನೇನು ಕಾರಣ ಬಂದೆಯೆಲೆ ಮಗನೆ ಹೇಳೆನಲು
ಭೂನಾಥನೆಂದ, ಖಗಮೃಗದ ಕಾಟಕ್ಕೆ ಸೈ
ರಿಸಲಾಱದೆವನೀಜನಂ ।
ಹಾನಿವೆತ್ತೊಱಲಿ ಮೊಱೆಯಿಡೆ ಕೇಳ್ದು ಬೇಂಟೆಯ ಸು
ಮಾನಕ್ಕೆ ಬಂದೆನೆಂದೆನೆ ತ್ರಿಕಾಲೋಚಿತ
ಜ್ಞಾನಿ ಮುನಿಯಱಿದನರಸನ ಮೇಲೆ ಕೌಶಿಕನ
ಕಾಟವಡಿಯಿಟ್ಟನುವನು ॥ ೩೫

ಪಿಸುಣವಿಶ್ವಾಮಿತ್ರಮುನಿ ಮುನಿದು ತಪ್ಪ ಸಾ
ಧಿಸುವ ನೀನಱಿದಿರೆಂಧಱುಪದೇಶಱುಪಿದಡೆ
ಪಿಸುಣತ್ವವಱುಪದಿರ್ದಡೆ ನೃಪನ ಕೇಡನಾ
ನೋತ್ತುಪೇಕ್ಷಿಸಿದಾತನು ।
ಗಸಣಿಯಾಯ್ತೀಗೆಯ್ವನೆಂದು ಮನದೊಳಗೆ ಚಿಂ
ತಿಸಿ ಮನೆಗೆ ಬಂದ ಶಿಷ್ಯನನು ಬೋಧಿಸಲು ಕುಂ
ದೆಸೆಯದಿರ[ಧಾಂ] ಪೇಳದಂತೆ ಪೇಳ್ದಪೆನೆಂದು
ನೆನೆದನಾ ಮುನಿನಾಥನು ॥ ೩೬

ಎನ್ನನೊಲ್ಲುವೊಡೆ ಕುಲಾಚಾರಮಂ ಬಿಡದಿರ್ಪ
ಧುನ್ನತಿಕೆ ಬೇಹಡುತ್ತಮಕೀರ್ತಿ ಕೆಡದಿಹಡೆ
ನನ್ನಿಯುಳಿವಡೆ ಮಗನೆ ಹೋಗದಿರು ಮಱೆದು ವಿ
ಶ್ವಾಮಿತ್ರನಾಶ್ರಮಕ್ಕೆ ।
ಗನ್ನದಿಂ ಮಱಹಿಕ್ಕಿ ಕೊಂಡೊಯ್ದು ಬಳಿಕ ಮುನಿ
ಬನ್ನಬಡಿಸಿಯೆ ಕಾಡಿದಪನಱಿದಿರೆಂದು ಪೇ
ಳ್ದನ್ನೊಂದು ಚೋದ್ಯಮಂ ನೋಡುಬಾಯೆಂದು ತಂ
ದನು ವಿರೂಪಾಕ್ಷನೆಡೆಗೆ ॥ ೩೭

ನೋಡಿ ಪರಮಾನಂದ ಮೂಡಿ ಸಂತಸದೊಳೋ
ಲಾಡಿ ಪುಳಕ ಸ್ವೇದ ತೊದಳು ಕಂಪನ ಮಱವೆ
ಗೂಡಿ ಮನದೊಳು ತನುವಿನೆಚ್ಚಱಿಂದುಬ್ಬಿ ಹಾ
ರೈಸಿ ಹರುಷದ ಸುಖದಲಿ ।
ಹಾಡಿ ನಾನಾ ಸ್ನಪನ ಯಕ್ಷಕರ್ದಮ ಪುಷ್ಪ
ಗಾಡಿವಡೆಯಲು ಮಹಾರುದ್ರಾಭಿಷೇಚನದ
ಜೋಡಿಯಿಂ ಪಂಪಾಂಬಿಕಾಪತಿಯ ಪೂಜೆಮಾ
ಡಿದ ಹರಿಶ್ಚಂದ್ರನೃಪನು ॥ ೩೮

ಇಂದಾನು ಕೃತಕೃತ್ಯನಾದೆನೆನ್ನಯ ಜನ್ಮ
ವಿಂದು ಸಾಫಲ್ಯವಾಯ್ತಖಿಳಜಗದಳಲ್ಪರಿಯ
ನಂದಿಸುವ ಪಾರದ [ಯೆ] ಸಂಸಾರವಾರಿಧಿಯ
ನುತ್ತರಿಪ ಗುರುಪದವನು
ತಂದು ತೋಱುತ್ತಲಾ ಶ್ರೀಗುರು ವಿರೂಪಾಕ್ಷ
ತಂದೆಯಂ ಕಾಣಿಸಿತು ನಾಡ ಗಾದೆಯಬಿಟ್ಟ
ಯಿಂದ ಕಟಕವ ಕಂಡೆನೆಂಬುದೆನಗಾಯ್ತೆನು
ತ್ತೆಜಗಿದಂ ಭೂನಾಥನು ॥ ೨೯

## ೪. ವಿಶ್ವಾಮಿತ್ರಾಶ್ರಮ ಪ್ರವೇಶ

ಗುರುವಸಿಷ್ಠಂಗೆಜಗಿ ನೇಮವಂ ಪಡೆದಖಿಳ
ಗುರುವಿರೂಪಾಕ್ಷಲಿಂಗವನು ಬೀಳ್ಕೊಂಡು ಭಾ
ಸುರ ವರೂಥವನೇಱಿ ಭೂಪಾಲಮುಕರದ್ವ
ಜಂ ನಡೆಯೆ ತಡೆವೇಂಟಿಗೆ ।
ಪರಿಕರವ ಪರಿವಾರಸಹನುವಾಗಿ ವಿಪಿನದೊಳು
ಹರೆದು ನಡೆಯಲ್ಕತ್ತಲಿತ್ತ ಕೌಶಿಕಮುನೀ
ಶ್ವರನೊಂದು ಮಾಯಾವರಾಹನಂ ಮಾಡಿ ಕಳು
ಹಿದನು ಭೂರಮಣನೆಡೆಗೆ ॥ ೧

ಎಲೆಲೆಲೆಲೆಲೇ ಹಂದಿಯೆನುವಾದುದೆಬ್ಬಬ್ಬುಬೆಂ
ದುಲಿದು ನಾಯ್ಗಳುಮೆರಸಿ ಮುಕ್ಕುಱುಕ್ಕಲು ಮೆಲ್ಲ
ನೊಲೆದುಬ್ಬಿ ಪುಟನೆಗೆದು ಗಜಱಿ ಗರ್ಜಿಸಿ ಪುಳಿಂ
ದರ ಮೇಲೆ ಬವರಿದಿರುಗಿ ।
ಬಲವಂದು ಹೊಯ್ದು ಬೇಗಕ್ಕೆ ಬಿಱುಮುಂದಿ ನ್ನಾ
ಳಲ ಹೊಱಿಗಳಂ ಕೊಟ್ಟಿದಂತೆಲ್ಲರೊಡಲ ಕಳ
[1]ವಳಿಗೆಯ್ದು ಬೀದಿವರಿದೊಕ್ಕಲಿಕ್ಕಿತ್ತು ರ
ಕ್ಕಸಮಿಗಂ ಕಾಡೊಳೆಂದು ॥ ೨

1 ಪಲ (ಖ.), ಹರ (ಘ.)

ಬಿಟ್ಟ ತಲೆಗಿಡಂ ಹಿಡಿದು ಕಳೆದ್ದುಡುಗೆ ಕಾಡ ಮುಳು
ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಳಲ್ವ
ನೊಟ್ಟಗೊಳೆಡಹಿ ಕೆಡೆದೆಹೊಡೆದ ಮೊಳಕಾಲ್ ತೇಕು
ವೆಳ್ಳೆಗಳ ವೆರಸೊಜಿಲುತ ।
ಕೆಟ್ಟೋಡುತಿರಲೊರ್ವನವನ ಕಂಡದಿರಡ್ಡ
ಗಟ್ಟಿ ಕೇಳಲು ಹುಹುಹು ಹುಲಿಯಲ್ಲ ಹಂದಿಯುಱೆ
ಯಟ್ಟಿ ಬರುತಿರ್ದುದಿನ್ನೆಲ್ಲಿ ತೋಱೆನಲು ನೀ
ವೇ ಅಱಸಿಕೊಂಬುದೆಂದ ॥ ೨

ಹೆವಱೆದೆಯ ಬೇಡನಂ ಬೋಳೈಸಿ ನೃಪರೂಪ
ಮದನನಲ್ಲಿಗೆ ತಂದು ನುಡಿಸಿ ಕೇಳಲು ಪೇಳ್ವ
ಕುದಿಹವೇಕದಿದೆನ್ನದೆಲ್ಲಾ ಕಿರಾತಸಂ
ಕುಲದ ಗುಱಿ ನೆಱೆದುದೆಂದು ।
ಹದುಳದಿಂದರಸ ಮನ್ನೆಯಗಂಡನಾಗು ಬೇ
ಗದೊಳೆಂದೊಡೇಂ ಕಾರಣಂ ಪೇಳೆನಲ್ಕೆ ಪೇ
ಳ್ವುದಕೆ ತೆಱಹಿಲ್ಲ ಹೋಗೆಂದಡವನೀಶನವ
ನಂ ಜಱೆದು ಬೆಸಗೊಂಡನು ॥ ೪

ಕಡುಗಲಿ ಹಿರಣ್ಯಾಕ್ಷನೆಂಬ ರಕ್ಕಸನ ಬೆ
ನ್ನಡಗನುಗಿದ್ದಂದಿನ ವರಾಹನೋ ಪುರಹರಂ
ಪೊಡೆಯೆ ತೋಳ್ಪಱಿದ ಭೀಕರಗಜಾಸುರನೊ ಜಗ
ದ್ಧಳಲನಾಱುಸುವೆನೆಂದು ।
ಕಡುಕೈದು ದುರ್ಗಿ ನಿರ್ಘಾತನಂಗೆಯ್ಯೆ ಕೋ
ಡುಡಿದ ಮಹಿಷಾಸುರನೊ ಎಂದೆಂಬ ಸಂದೇಹ
ಕೆಡೆಯಾದ ಸೊಕ್ಕಿದೆಕ್ಕಲನನೊಂದಂ ಕಂಡೆ
ನರಸ ಚಿತ್ತೈಸೆಂದನು ॥ ೫

ಕೊಬ್ಬಿ ಬೆಳೆದ ವರಾಹನಿರಲಾಗದೇ ಕಾಡೊ
ಳೆಬ್ಬರಿಸಿ ನುಡಿವೆಯುದಱಿಂ ಬೇಡವಡೆಗೆ ಬ
ಪ್ಪಬ್ಬಸವೇನೊ ನೀನ್ನೋಡಿಹೋಹುದಕೆ ಕಾ
ರಣವಾವುದೆಲವೊ ಎನಲು ।
ಉಬ್ಬಿ ಮುಂಗುಡಿವರಿದು ಕಡುಕೈದ ಶಬರರೊಳ
ಗೊಬ್ಬರುಳಿಯದ ತೆಱದಿ ಕೊಂದಿಕ್ಕಿ ನಾಯ್ಗಳಂ
ಗುಬ್ಬುವಿಕ್ಕಿಸಿದ ರಕ್ಕಸವಂದಿ ತಾನೆ ಪೇ
ಳಿತ್ತು ನಾನೇಕೆಂದನು ॥ ೬

ಪಡೆಯೆಯ್ದೆ ಮಡಿಯಿತ್ತೆ ಮಡಿಯಿತ್ತು ನಾಯ್ ಕೂಡೆ
ಕೆಡೆದವೇ ಕೆಡೆದವ್ವಾ ಹಂದಿಯಿರ್ದಪುದೆಯ್ದುದೆ
ಎಡೆಯೆನಿತು ಸಾರ್ದೆ ತೋಱಿಸಿದಪಾ ತೋಱಿದಪೆ
ನೇಳ್ವೆವೇ ನಡೆಯಿನ್ನೆನಲು ।
ಕಡುಮುಳಿದು ರಥವನ್ನುರವಣಿಸಿ ನೂಂಕುವ ಭೂಮಿ
ಯೊಡೆಯಂಗೆ ಭಾಷೆಯಂ ಕೊಟ್ಟು ನಾನಾ ಬೇಡ
ವಡೆಯೊಡೆಯರೆಯ್ದೆ ಕಂಡರು ಱೊಪ್ಪಮಂ ಮುಲಗಿ
ದಾಡೆಗಡಿಸೆಕ್ಕಲನನು ॥ ೭

ಮಸೆದ ದಾಡೆಯ ಕುಡಿಗಳಿಂದ ಕಿಡಿ ಸುರಿಯೆ ಘೂ
ರ್ಮಿಸುವ ಮೂಗಿಂದ ಕರ್ಬೊಗೆ ನೆಗೆಯೆ ಮುನಿದು ದಿ
ಟ್ಟಿಸುವ ಕೆಂಗಣ್ಣ ಕಡೆಯಿಂದ ದಳ್ಳುರಿ ಸೂಸೆ
ಬಲಿದ ಕೊರಳೊಲೆದ ಮುಸುಡು ।
ಕುಸಿದ ತಲೆ ನೆಗೆದ ಬೆನ್ ನಟ್ಟ ರೋಮಾಳಿ ಮಿ
ಳಿಸುವ ಬಾಲಂ ರೌದ್ರ ಕೋಪಮಂ ಬೀಱುಗ
ರ್ಜಿಸಿ ಬೀದಿವರಿದು ತೊತ್ತಳದುಳಿದು ಕೊಂದು ಕೂ
ಗಿಡಿಸಿತ್ತು ಲುಬ್ಧಕರನು ॥ ೮

ಇದ್ದ ಬೇಡರನೆಯ್ದೆ ಕೆಡಹಿದಡೆ ರಥದ ಮೇ
ಲಿದ್ದು ಕೋಪಾಟೋಪದಿಂದ ಕರತಳವ ನ್ನಾ
ಱುದ್ದಿ ಕೋದಂಡಮಂ ಸೆಳೆದು ಶರಮೂಡಿಗೆಯ
ಮುಡಲಿಱಿದು ಕೈಹೊಡೆಯುನು ।
ತಿದ್ದಿ ನಾರಿಯ ನೀವಿ ಮಿಡಿದು ಬಾಗಿದ ಕೊಪ್ಪಿ
ನಿದ್ದೆಸೆಯನಾರಯ್ದು ನೆಱೆ ಮೃತ್ಯುದೇವತೆಗೆ
ಬಿದ್ದನಿಕ್ಕುವೆನೆಂದು ಭೂವಲ್ಲಭಂ ನುಡಿಯೆ
ದಿಗುಪಾಲರಳವಳಿದರು ॥ ೯

ಗರಳಗೊರಳವನರಳಸರಳಂಗೆ ಮುನಿವಂತೆ
ಯಿರುಳ ತಿರುಳಿನ ಹೊರಳಿಗಾ ತರಣಿ ಕೆರಳ್ವಂತೆ
ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು
ಹೊರಳುತ್ತ ಬೀಳುತ್ತಲು ।
ಹುರುಳಿಳಿದು ಧುರವ್ವೊಡೆದು ಸರಳುರ್ಚೆ ನರಳುತ್ತ
ತೊರಳೆಯ್ದುಡಸಲು ಮೂಗನರಳಿಸಿಚ್ಚಂಬ ಹೊ
ತ್ತುರುಳ್ವ ಕಂಬನಿಯಿಂದ ತರಳಚಿತ್ತದ ಹಂದಿ
ಮರಳಿ ಕಾನನಕೆಯ್ದಿತು ॥ ೧೦

ಬಳಿವಿಡಿದು ಬಳಿಚಿದಂಬಿಂ ಮುಂದೆ ಹರಿದು ವನ
ದೊಳಗಡಗಿ ಮಾಯವಾದೆಕ್ಕಲನನಲ್ಲಲ್ಲಿ
ಸುಳಿದಱಸಿ ಕಾಣದೆ ಮನಂನೊಂದು ಧೃತಿಯುಡಗಿ
ದಗೆದೋಱಿ ಕಟ್ಟಾಸಱು ।
ಮೊಳೆತು ಬಾಯಾಱಿ ತನು ಬೆಮರಿ ಮುಖ ಬಾಡಿ ರವಿ
ಕುಲಶಿರೋಮಣಿ ಹರಿಶ್ಚಂದ್ರರಾಯಂ ಕಂಡ
ನೇಱವಿಯೊಳು ನಾನಾವಿಶೇಷವಿಭವಂಬಡೆದ
ಮಂಗಳತಪೋವನವನು ॥ ೧೧

ಕಂದಮೂಲಂಗೆಳ್ಕ ಪೂಗೊಯ್ವ ಕೃಷ್ಣಾಜಿ
ನಂದಳೆವ ರುದ್ರಾಕ್ಷಿಗೋವ[1] ವಲ್ಕಲವಸನ
ವೃಂದವಂ ತೊಳೆವ ಮಿಸುಪಾ ದಾರಮಂ ಬಿಗಿವ
ಮೌಂಜಿಮೇಖಲೆಗಟ್ಟುವ ।
ಒಂದಿ ಭಸಿತವನಿಡುವ ಯಜ್ಞೋಪವೀತಮಂ
ಬಂಧಿಸುವ ಜಡೆಯ ಸುಂಕಿಸುವ ಸಮಿತಂ ತಪ್ಪ
ಹೆಂದದ ಮುನೀಶ್ವರಕುಮಾರರಂ ಕಂಡು ಕೈ
ಮುಗಿದಂ ಹರಿಶ್ಚಂದ್ರನು ॥ ೧೨

ವಿದಿತವೆನೆ ವೇದಘೋಷದ ಪುರಾಣಪ್ರಸಂ-
ಗದ ತರ್ಕತಂತ್ರಸಂವಾದದಾಗಮವಿಚಾ
ರದ ಸದೌಪನಿಷದರ್ಥಶ್ರವಣಧ್ವಾಸ್ತವ
ಸ್ತೋತ್ರಪಠನಪ್ರಕರದ ।
ಮೃದುಕಾವ್ಯಲಕ್ಷಣಾಲಾಪದ ಶಿವಾರ್ಚನಾಂ
ಗದ ಘಂಟಿಕಾರವದ ನಿತ್ಯಹೋಮಸ್ವಧಾಂ
ತ್ಯದ ಶ್ರವಣಸಂಭ್ರಮಕೆ ಬೆಱಗಾಗುತಿರ್ದನು ಹ
ರಿಶ್ಚಂದ್ರ ಭೂನಾಥನು ॥ ೧೩

ಫಳಭಾರದಿಂದೊಲೆದು ತೂಗಿ ಬಾಗುವ ಮರಂ
ಗಳ ಕೆಳಗೆ ತುಱುಗಿ ನಳನಳಿಸಿ ಬೆಳೆದೆಳಲತೆಯ
ತಳಿರ ತಿಳಿಗೊಳನ ಪುಳಿನಸ್ಥಳದ ಕಮಲಕೈ
ರವದ ತನಿಗಂಪುವೆರಸಿ ।
ಸುಳಿವ ತಣ್ಣೆಲರ ತಂಪಂ ಕಂಡು ಮಂತ್ರಿ ಭೂ
ತಳನಾಥ ಬಿಡುವಡಿದು ಠಾವೆಂದು ಬಿನ್ನೈಸೆ
ಜಲಜಸಖಕುಲತಿಳಕನಂದು ರಥಮಂ ಪಟ್ಟ
ದಂಗನೆ ಕುಮಾರ ಸಹಿತ ॥ ೧೪

---

1 ಗೊಯ್ವ (ಕ.ಖ.ಗ ಘ.), ಕೋವ (ಪ.)

ಬೞಲಿದ ರಥತುರಗವೃಂದಮಂ ಬಿಟ್ಟು ಶೀ
ತಳವಾರಿಯಂ ತೋಱಿ ಮೆಯ್ದೊಳೆದು ಲಲಿತಶಾ
ಡ್ವಳವನೊಲವಿಂ ಕೊಯ್ದು ಮುಂದಿಟ್ಟು ಕಟ್ಟಿ ಪ್ರ
ಧಾನ ನಟ್ಟಡವಿಯೊಳಗೆ ।
ಬಳಿವಿಡಿದು ಬಂದ ಕಟಕವನೆಯ್ದೆ ಬಿಡಿಸಿ ಭೂ
ತಳಪತಿಗೆ ಕೈಗೊಟ್ಟು ನಿರ್ಮಳಸರೋವರದೊ
ಳೞುಪಿ ಶಿಶಿರೋಪಚಾರಂಗಳಂ ಮಾಡಿದಂ
ಡಗೆ ತೊಲಗಿ ವಿಶ್ರಮಿಸಲು ॥ ೧೫

ಘನಪುಣ್ಯಮಯಮೆನಿಪ್ಪೀ ತಪೋವನದೊಳಿಹ
ಮುನಿಯಾವನೋ ಮಹಾದೇವನೇ ಬಲ್ಲನಾ
ತನ ಶಾಂತಿಯಿಂದ ಶಶಿ ಚಾರಿತ್ರದಿಂ ಗಂಗೆ
ವರತಪಸ್ತೇಜದಿಂದ ।
ದಿನಕರಂ ಸುಳಿವಿಂದ ತಂಗಾಳಿ ನುಡಿಯ ಮೋ
ಹನದಿಂದ ಸುಧೆಯುದಾರತ್ವದಿಂ ಸುರಕುಜಂ
ಜನಿಸದಿರನೆಂದು ಕೊಂಡಾಡುತಿರ್ದಂ ಹರಿ
ಶ್ಚಂದ್ರನಾ ಮಂತ್ರಿಯೊಡನೆ ॥ ೧೬

ಹೊಗಳುತ್ತ ಹಾರಯಿಸುತುಬ್ಬುತ್ತ ಕೊಬ್ಬುತ್ತ
ನಗುತ ನಲಿಯುತ್ತ ಹಾಡುತ್ತಾಡುತಾನಂದ
ವೊಗೆಯುತಿರಲೊಬ್ಬ ಮುನಿಯಂ ಕಂಡಿದಾವನಾ
ಶ್ರಮವೆಂದು ಬೆಸಗೊಂಡಡೆ ।
ಖಗಡ ವಿಶ್ವಾಮಿತ್ರಮುನಿಯ ಬನವೆನೆ ಸುಖಂ
ಸುಗಿದು ಪೊಯ್ದಡಸಂತೆ ಹಾವಗಿದು ಬಿಟ್ಟಂತೆ
ಬಗೆ ಬೆದಱೆ ಗುರುವಾಜ್ಞೆಯುೞಿದುದಿನ್ನೇವೆನೆಂ
ದನು ಹರಿಶ್ಚಂದ್ರನೃಪನು ॥ ೧೭

ಹೊಳೆವ ಮೇರುವ ಸುತ್ತಿ ಬೆಂಡಾದ ರವಿ ಚಂದ್ರ
ಕಳೆಯು ತೊಡೆಯೆಡೆಯೊಳೊಯ್ಯನೆ ಮಲಗುವಂತೆ ರವಿ
ಕುಲಲಲಾಮಂ ವರಾಹನ ಹಿಂದೆ ಹತ್ತಿದ್ದಾ
ಸಱ ಮೇಲೆ ಗುರುವಾಜ್ಞೆಯ ।
ಕಳೆದ ಕೌಶಿಕನಾಶ್ರಮಂಬೊಕ್ಕ ಚಿಂತೆಯಿಂ
ಮುಳುಗುತ್ತ ನಿಜಸತಿಯ ತೋರದೊಡೆಗಳ ಮೇಲೆ
ಲಲಿತಮಣಿಮುಕುಟಮಂಡಿತಮಸ್ತಕವನಿಕ್ಕಿ
ಮಗ್ಗುಲಿಕ್ಕಿದನಾಗಳು ॥ ೧೮

ಸತಿ ಮುಡಿಸಿ ನೀಡುವೆಲೆವಿಡಿದ ಕೈ ಬಸವಳಿವು
ತ್ತತಿಚಿಂತೆಯೊಳು ಮಱೆದ ತನು ಜೊಮ್ಮುವಿಡಿದ ಪು
ಳ್ಕತಿಭಾರವಾಗಿ ಕಣ್ಮುಚ್ಚಿ ತೋಳ್ತೊಡೆ ಮಿಡುಕೆ
ಸುಯ್ ಸೂಸೆ ನಿದ್ರೆ ಕವಿದು ।
ವಿತತಸುಖದಿಂದಿರುತಿರಲ್ಕೆ ನಾನಾದುಃಖ
ಯುತವಪ್ಪುದೊಂದು ಕನಸಂ ಕಂಡು ನೊಂದು ಭೂ
ಪತಿ ಬೆದಱಿದಂತೆ ಭೋಂಕೆನಲೆದ್ದು ಬೆಬ್ಬಳಿಸಿ
ನಾಲ್ದೆಸೆಯನಾರಯ್ದನು ॥ ೧೯

ಧುರದೊಳರಿಭೂಭುಜರನಂಜಿಸುವ ನಡುಗಿಸುವ
ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ
ಬಿರುದಂಕಮಲ್ಲ ನೀ ನಡುಗಲೇತಕ್ಕೆ ಹೇ
ಳೆಂದು ಮೆಲ್ಲನೆ ನುಡಿಸಲು ।
ತರುಣಿ ಕೇಳೊಂದು ಕನಸಂ ಕಂಡೆನಾ ಕನಸು
ನಿರುತವೆಂದೇ ಕಣ್ಣ ತೆಱೆದೆ ನೀನಿಂತಿದಱ
ಪರಿಯಂ ವಿಚಾರಿಸೆಂದವನೀಶ ನುಡಿಯಲಾ
ನುಡಿಗೆ ಸತಿ ಹೂಂಕೊಂಡಳು ॥ ೨೦

ಘುಡುಘುಡಿಸುತ್ತೊಬ್ಬ ಮುನಿ ಬಂದು ನಾಸ್ಥೋಲಗಂ
ಗೊಡುವ ಮಣಿಮಂಟಪದ ಕಂಭವೆಲ್ಲವನು ತಡೆ
ಗಡಿದು ಹೊಂಗಳಸಂಗಳಂ ಮಾಣದೊಡೆಬಡಿದು
ನೆರೆದ ಸಭೆಯೊಳಗೆನ್ನನು ।
ಕೆಡಹಿ ಸಿಂಹಾಸನವನೊಯ್ಯಾಗಳೆನ್ನೆದೆಯ
ನಡದರ್ದೊಂದು ಕಾಗೆ ಕರೆದುದು ಬಳಿಕ್ಕಾಂ ಗಿರಿಯ
ನಡರ್ದು ಶಿಖರದೊಳಿಸೆವ ಮಣಿಗೃಹಂಬೊಕ್ಕೆನಿದ
ಱಂತಸ್ಥವೇನೆಂದನು ॥ ೨೧

ಬಗೆವಡೀ ಕನಸು ಗುರುವಾಜ್ಞೆಯಂ ಮಿಾಱಿತ
ಕ್ಕೊಗೆವ ಕೇಡಿಂಗೆ ಸೂಚನೆ ಮುನಿಯಬೇಡ ಮಂ
ತ್ರಿಗೆ ಮಗಂಗೆನಗೆ ರಾಜ್ಯಕ್ಕೆ ಚತುರಂಗಸೇ
ನೆಗೆ ಸಕಲಭಂಡಾರಕೆ ।
ನಗರಕ್ಕೆ ಸರ್ವಪರಿವಾರಕ್ಕೆ ತೇಜದ್ಧೀ
ಳ್ಗೆಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ
ಮಿಗೆ ಸತ್ಯವಂ ಬಿಟ್ಟು ಕೆಡದಿರೆವನೀಶ ಕೈ
ಮುಗಿದು ಬೇಡಿದೆನೆಂದಳು ॥ ೨೨

ಬಿಡೆ ತಪೋವನವ ಕಾಣುತ್ತ ಕಡೆಗಣಿಸಿ ಪೋ
ದಡೆ ಕೇಳ್ದು ಮುನಿ ಮುನಿವನಲ್ಲದೆಂದಿನ ಹಗಲ
ಕಡೆತನಕ ನೋಡಿದೆವು ಕೌಶಿಕಮುನೀಶ್ವರಂ
ಗೆರಸ ವಂದಿಸಿದನೆಂದು ।
ನುಡಿದು ನಡೆಗೊಂಬನ್ನೇಳೇಳೆಂದು ಮಂತ್ರಿ ತ
ನ್ನೊಡೆಯಂಗೆ ಬುದ್ಧಿವೇಳ್ದಬ್ಬಿಸುತ್ತಿರಲತ್ತ
ಪೊಡವೀಶನಂ ತಂದ ಹಂದಿ ಹರಿಯಿತ್ತು ಕೌ
ಶಿಕನನುಷ್ಠಾನದೆಡೆಗೆ ॥ ೨೩

ನಿಡುಸರದೊಳ್ಕೀವುಸುರು, ಹೊಯ್ವಳ್ಳೆ ಡೆಂಡಣಿಸು
ವಡಿ ಹನಿವ ಬೆಮರು ಮುಱುವೊನೆಗಂಡ ಬಾಣಂಗ
ಳೆಡೆಯಿಂದ ಸುರಿವ ಬಿಸಿನೆತ್ತರ್ಕೇಱುಗಳ ವೇ
ದನೆಗ್ರಾಱಿಷ್ವರೆಮುಚ್ಚುವ ।
ಕಡೆಗಣ್ಗೆರಳ್ವ ನಾಸಾಪುಟಂ ಬಲಿದ ನೊರೆ
ಯಿಡುವ ಕಟವಾಯ್ಗೆ ಕುಸಿದ ತಲೆ ಸುಗಿದ ದರ್ಪ ಹುರಿ
ಯೊಡೆದ ರೋಮಂ ತೂಗಿ ತೊನೆದು ಮೆಯ್ಮಱೆವ ಹಂ
ದಿಯನು ಕೌಶಿಕ ಕಂಡನು ॥ ೨೪

ಹಂದಿಯಂ ಕಾಣು[1]ಹ ತಡಂ[1] ಕೋಪಗಿಚ್ಚು ಭುಗಿ
ಲ್ಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ
ಸಂದ ಯೋಗಂ ಹಿಂಗಿ ದಯೆ ದಾಂಟಿ ನೀತಿ ಬೀ
ತ್ತಾನಂದವಱತು ಹೋಗಿ ।
ಹಿಂದ ನೆನೆದುರಿದೆದ್ದು ಸಿಕ್ಕಿದನಲಾ ಭೂಪ
ನೆಂದು ನಾನಾಯ್ತು ತಾನಾಯ್ತು ಕೆಡಿಸದೆ ಮಾಣೆ
ನೆಂದು ಗರ್ಜಿಸುವ ಕೌಶಿಕನ ಹೂಂಕಾರದಿಂ
ದೊಗೆದರಿಬ್ಬರು ಸತಿಯರು ॥ ೨೫

ಮುನಿಗೆ ಹೊಲೆಯಾವುದತಿಕೋಪ ಬದ್ಧದ್ವೇಷ
ವನಿಮಿತ್ತವೈರವಿವದಱಿಂದ ಹುಟ್ಟಿದರಾಗಿ
ವಸಿತೆಯರು ಕಡೆಗೆ ಹೊಲತಿಯರಾಗಿ ಕೆಲಸಾರಿ
ನಿಂದು ಬೆಸನಾವುದೆನಲು ।
ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ
ವನದೊಳೈದನೆ ನೀವು ಸರ್ವಬುದ್ಧಿಗಳೊಳಾ
ತನ ಮರುಳುಮಾಡುತಿರಿ ಹೋಗಿಯೆಂದಟ್ಟಿದಂ
ದುರ್ಮಂತ್ರಬಲವಂತನು ॥ ೨೬

1 ತಹ (ಘ.ಪ.)

ಸಂದ ಕಾರಿರುಳ ಕನ್ನೆಯರು ಹಗಲಂ ನೋಡ
ಲೆಂದು ಬಂದರೊ ಸುರಾಸುರರಬುಧಿಯಂ ಮಥಿಸು
ವಂದು ಹೊಸವಿಷದ ಹೊಗೆ ಹೊಯ್ದು ಕಗ್ಗನೆ ಕಂದಿ
ಜಲದೇವಿಯರು ಮನದಲಿ ।
ನೊಂದು ಮಾ[ನಿ]ಸರಾದರೋ ಕಮಲಜಂ ನೀಲ
ದಿಂದ ಮಾಡಿದ ಸಾಲಭಂಜಿಕೆಗಳೊದವಿ ಜೀ
ವಂದಳೆದವೋ ಎನಿಪ್ಪಂದದಿಂ ಬಂದರಂ
ಗನೆಯರವನೀಶನೆಡೆಗೆ ॥ ೨೭

ಮಾಯದಬಲೆಯರು ಕಾಣುತ್ತ ಮಝುಭಾಪದಟ
ರಾಯ ಮಝುರೇ ರಾಯ ರಾಯದಳವುಳಕಾಜ
ರಾಯಕಂಟಕ ರಾಯಜಗಜಟ್ಟಿ ರಾಯದ
ಲ್ಲಣ ರಾಯಕೋಳಾಹಳ ।
ರಾಯಭುಜಬಲಭೀಮ ರಾಯಮರ್ದನ ರಾಯ
ಜೀಯ ಚಿರಂಜೀವಯೆಂದು ಕೀರ್ತಿಸಿ ಗಾಣ
ನಾಯಕಿಯರೊಲಿದು ದಂಡಿಗೆವಿಡಿದು ಪೊಡಮಟ್ಟು
ಹಾಡಲುದ್ಯೋಗಿಸಿದರು ॥ ೨೮

ಎಕ್ಕಲನ ಬಳಿವಿಡಿದು ಸುತ್ತಿ ದಾಸಜಿನಮುನಿ
ರಕ್ಕಸನ ಬನಕೆ ಬಂದಂಜಿಕೆಯನೆರಡನೆಯ
ಮುಕ್ಕಣ್ಣನೆನಿಪ ಗುರುವಾಜ್ಞೆಗೆಟ್ಟಳಲನೆ
ಲ್ಲದೆ ಕನಸ ಕಂಡ ಭಯವ ।
ಮಿಕ್ಕು ಮಱಿವಂತೆಡಸಿ ಕವಿವ ಗತಿಗಳ ಸೊಗ[1][ಸಿ][1]
ನಕ್ಕಿಸದೆ ಸಮಯೋಚಿತದ ಪಸಾಯಕ್ಕೆ ಮನ
ವುಕ್ಕಿ ಸರ್ವಾಭರಣಮಂ ಗಾಣರಾಣಿಯರಿ
ಗಿತ್ತನು ಹರಿಶ್ಚಂದ್ರನು ॥ ೨೯

---

1 ಸ (ಪ.)

ಬಡತನವ ಹೊತ್ತಾನೆ ದೊರಕಿ ಫಲವೇನು ನೀ
ರಡಸಿರ್ದ ಹೊತ್ತಾಜ್ಯ ದೊರಕಿ ಫಲವೇನು ರುಜೆ
ಯಡಸಿ ಕೆಡೆದಿಹ ಹೊತ್ತು ರಂಭೆ ದೊರೆಕೊಂಡಲ್ಲಿ
ಫಲವೇನು ಸಾವ ಹೊತ್ತು।
ಪೊಡವಿಯೊಡೆತನ ದೊರಕಿ ಫಲವೇನು ಕಡುವಿಸಿಲು
ಹೊಡೆದು ಬೆಂಡಾಗಿ ಬೀಳ್ವಮಗೆ ನೀನೊಲಿದು ಮಣಿ
ದೊಡಿಗೆಗಳನಿತ್ತು ಫಲವೇನು ಭೂಪಾಲ ಹೇ
ಳೆನುತ ಮತ್ತೆಂತೆಂದರು ॥ ೩೦

ಕಡಲೊಳಾಳ್ವಂಗೆ ತೆಪ್ಪವನು ದಾರಿದ್ರಂಗೆ
ಕಡವರವನತಿರೋಗಿಗಮೃತಮಂ ಕೊಟ್ಟಡವ
ರಡಿಗಡಿಗದಾವ ಹರುಷವನೆಯ್ದುತಿಪ್ಪರವ
ರಂ ಪೋಲ್ವರೇ ಪೊತ್ತಿನ।
ಸುಡುಸುಡನೆ ಸುಡುವ ಬಿಱುಬಿಸಿಲ ಸೆಕೆಯುಸುರ ಬಿಸಿ
ಹೊಡೆದುದುರಿಹತ್ತಿ ಬಾಯ್ ಬತ್ತಿ ಡಗೆ ಸುತ್ತಿ ಸಾ
ವಡಸುತಿದೆ ನಿನ್ನ ಮುತ್ತಿನ ಸತ್ತಿಗೆಯನಿತ್ತು
ಸಲಹು ಭೂಭುಜಯೆಂದರು ॥ ೩೧

ರವಿಕುಲದ ಪೀಳಿಗೆಯೊಳೊಗೆದ ರಾಯರ್ಗೆ ಪ
ಟ್ಟವ ಕಟ್ಟುವಂದಿದಿಲ್ಲದಱರಸುತನ ಸಲ್ಲ
ದವನಿಯೊಳು ಯುದ್ಧರಂಗದೊಳಿದಂ ಕಂಡ ಹಗೆ
ಗಳು ನಿಲ್ಲರಿದಱ ಕೆಳಗೆ।
ಕವಿವ ನೆಳಲೊಳಗಾವನಿರ್ದನಾತಂಗೆ ತಾಂ
ತವಿಲ್ದರು ಬಡತನಂ ರೋಗವಪಕೀರ್ತಿ [ಪರಿ
ಭವ]ಭಯಂ ಹರಿವುದಿದಱಿಂದಱಿದು ಸತ್ತಿಗೆಯ
ಕೊಡಬಹುದೆ ಹೇಳೆಂದನು ॥ ೩೨

ಅನುನಯದೊಳೆಲ್ಲವಂ ಕೊಡಬಹುದು ಬಿಡಬಹುದು
ಜನನಿಯಂ ಜನಕನಂ ನಲ್ಲಳಂ ದೈವವಂ
ಮನವಾರೆ ನಂಬಿ ನಚ್ಚಿರ್ದ ಪರಿವಾರವುಂ
ಕೊಡುವ ಬಿಡುವತಿಕಲಿಗಳು।
ಜನರೊಳಗೆ ಜನಿಸಲ್ಕಿಂದೆನಲು ನೀನೀಗ ಪೇ
ಳ್ದನಿತಱೊಳು ಬೇಡಿದಡೆ ಕೊಡಬೇಡ ಕೊಡೆಯನ್ನೀ
ಯೆನೆ ಲೋಭವೇಕರಸ ಎನಲದಲ್ಲದೆ ಬೇಱೆ
ಮಾತೆಪಿತರಿಲ್ಲೆಂದನು ॥ ೩೩

ಲೋಗರಿಗೆ ಕೊಡಬಾರದಾಗಿ ಸತಿ ವಂಶಗತ
ವಾಗಿ ಬಂದುದಱಿಂದ ತಂದೆ ಪಟ್ಟವ ಕಟ್ಟು
ವಾಗೆಲೆರ್ಚಿಸಿಕೊಂಬುದಾಗಿ ದೈವಂ ನೆಳಲ
ತಂಪನೊಸೆದೀವುದಾಗಿ।
ಸಾಗಿಸುವ ತಾಯ್ ಧುರದೊಳರಿಗಳಂ ನಡುಗಿಸುವು
ದಾಗಿ ಚತುರಂಗಬಲವೆನಿಸಿತೀ ಛತ್ರವೆಂ
ಬಾಗಳಿದನಱಿದಱಿದು ಬೇಡುವರನತಿಮರುಳ
ರೆನ್ನರೇ ಮೂಜಗದೊಳು ॥ ೩೪

ಇಳೆಯೊಳಗೆ ಹೆಸರುಳ್ಳ ದಾನಿಯೆಂಬುದನು ಕೇ
ಳ್ದೆಳಸಿ ಕಟ್ಟಾಸೆವಟ್ಟೆಯ್ತಂದು ಬೇಡಿ ನಿ
ಷ್ಫಳವಾಗದಂತೆ ನಾವತಿಮುಱುಗದಂತಳಲ
ದಂತೆ ಬಿಸುಸುಯ್ಯದಂತೆ।
ತಿಳಿದು ನೀನೆಮಗೆ ವಲ್ಲಭನಾಗಿ ಚಿತ್ತದು
ಮ್ಮಳಿಕೆಯಂ ಕಳೆ ಹರಿಶ್ಚಂದ್ರಭೂನಾಥ ಎಂ
ದಳವಳಿದು ಬಾಯ್ಬಿಟ್ಟು ಕೈಮುಗಿದು ನುಡಿದರೊಲ
ವಿಂದನಾಮಿಕಸತಿಯರು ॥ ೩೫

ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ
ಭೂಪರಿಲ್ಲೆಂದು ತನಕ।
ಹೊಲತಿಯರು ಬಂದಾವು ಸತಿಯರಾದಪ್ಪೆವೆಂ
ಬುಲಿಹವೆಂಬುದು ಬಂದ ಕಾಲಗುಣವೋ ನಿಂದ
ನೆಲದ ಗುಣವೋ ನೋಡು ನೋಡೆಂದು ಕಡುಮುಳಿದು
ಕೋಪಿಸಿದನವನೀಶನು ॥ ೩೬

ಪಾವನಕ್ಷೀರಮುಂ ಕೊಡುವ ಕೆಚ್ಚಲ ಮಾಂಸ
ವಾವ ಲೇಸನಿದುಳ್ಳ ಮಧುವನೊಸೆದೀವ ನೊಳ
ವಾವ ಲೇಸಧಿಕಕಸ್ತೂರಿಯಂ ಕೊಡುವ ಮೃಗ
ನಾಭಿ ತಾನಾವ ಲೇಸು।
ದೇವರಿಗೆ ಸಲ್ಲವೇ ಉತ್ತಮಗುಣಂಗಳಿ
ರ್ದಾವ ಕುಂದಂ ಕಳೆಯಲಾಜನವನೀಶ ಕೇಳ್
ಭಾವಿಸುವಡೆಂದೆಮ್ಮ ರೂಪುಜವ್ವನವಿರಲು
ಕುಲದ ಮಾತೇಕೆಂದರು ॥ ೩೭

ಅಕ್ಕಕ್ಕು ಬಚ್ಚಲುದಕಂ ತಿಳಿದಡಾರ ಮೀ
ಹಕ್ಕೆ ಯೋಗ್ಯಂ ನಾಯ್ಗೆ ಹಾಲುಳ್ಳಡಾವನೂ
ಟಕ್ಕೆ ಯೋಗ್ಯಂ ಪ್ರೇತವನದೊಳಗೆ ಬೆಳೆದ ಹೂ
ವಾರ ಮುಡಿಹಕ್ಕೆ ಯೋಗ್ಯಂ।
ಮಿಕ್ಕ ಹೊಲತಿಯರು ನೀವೆನಿಸೆ ನಿಮ್ಮ ಜವ್ವನದ
ಸೊಕ್ಕು ರೂಪಿನ ಗಾಡಿ ಜಾಣತನವೊಪ್ಪವೇ
ತಕ್ಕೆ ಯೋಗ್ಯಂ ರಮಿಸಿದವರುಂಟೆ ಶಿವಶಿವೀ
ಮಾತು ತಾ ಹೊಲೆಯೆಂದನು ॥ ೩೮

ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ ಮಾ
ತಾಡಿ [1]ಹೊಗಳಿದ[1] ಬಾಯ್ಗೆ ಹೊಲೆಯಿಲ್ಲ ರೂಪ ನೆಱೆ
ನೋಡಿದ ವಿಲೋಚನಕೆ ಹೊಲೆಯಿಲ್ಲ ಮೆಯ್ಮುಡಿಗ
ಳಿಂ ಸುಳಿವ ತಂಗಾಳಿಯಿಂ।
ತೀಡುವ ಸುಗಂಧಮಂ ವಾಸಿಸಿದ ನಾಸಿಕಕೆ
ನಾಡೆ ಹೊಲೆಯಿಲ್ಲ ಸೋಂಕಿಂಗೆ ಹೊಲೆಯುಂಟಾಯ್ತು
ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮ
ವೊಂದಧಿಕವೇ ಎಂದರು ॥ ೩೯

ಕಂಡಱಿವವೈಸಲೇ ನಯನೇಂದ್ರಿಯಂ ಘ್ರಾಣ
ಕೊಂಡಱಿವವೈಸಲೇ ವಾಸನೆಯ ಕರ್ಣಂಗ
ಳುಂಡಱಿವವೈಸಲೇ ಶಬ್ದಮಂ ದೂರದಿಂ
ದಲ್ಲದಿವು ಮುಟ್ಟಲಿಲ್ಲ।
ಭಂಡತನವೀ ಮಾತಿದೆಕ್ಕೆಯುಪಮಾನವೇ
ಕೆಂಡವನು ಮುಟ್ಟಿದಡೆ ಬೇವಂತೆ ಕೇಳ್ದಡಂ
ಕಂಡು ವಾಸಿಸಿದಡಂ ಬೆಂದವೇ ಕಾಳುಗೆಡೆ
ಯದ್ದೆ ಹೋಗಿ ನೀವೆಂದನು ॥ ೪೦

ಶಾಪದಿಂದೆಮಗಾದ ದುಷ್ಕುಲಂ ಸತ್ಕುಲಜ
ಭೂಪ ನಿನ್ನಯ ಸಂಗದಿಂ ಶುದ್ಧವಪ್ಪುದೆಂ
ಬಾಪೇಕ್ಷೆಯಿಂ ಬಂದೆವೆನಲೊಡನೆ ನಿಮಗೋಸು
ಗೆನ್ನ ಕುಲಮಂ ಕೆಡಿಪೆನೆ।
ಪಾಪಿಗಳ ಪಾಪಮಂ ತೊಳೆವ ಗಂಗೆಗೆ ಪಾಪ
ಲೇಪವುಂಟಾಯ್ತೆ ಹೇಳರಸ ಎನೆ ಕುಲಧರ್ಮ
ವೀ ಪಂಥವಲ್ಲ ಕೊಡವಾಲ ಕೆಡಿಸುವಡಾಮ್ಲ
ವೆನಿತಾಗಬೇಕೆಂದನು ॥ ೪೧

---
1 ನುಡಿಸಿದ (ಪ.)

ಮಾತಿಂಗೆ ಮಾತುಗೊಡಲ್ಲರಿದು ನಿನ್ನಯ ನುತ
ಖ್ಯಾತಿಗೆ ವಟಂಗೆ ರೂಪಿಂಗೆ ಸುರುಚಿರ ಗುಣ
ವ್ರಾತಕ್ಕೆ ಹರೆಯಕ್ಕೆ ಗರುವಿಕೆಗೆ ಮನಸಂದು
ಮತಿಗೆಟ್ಟು ಮರುಳಾದೆವು।
ಓತು ಬಂದವರನುಪಚರಿಸದಿಪ್ಪುದು ನಿನಗೆ
ನೀತಿಯಲ್ಲೇಗೆಯ್ದಡಂ ಗಂಡನಾದಲ್ಲ
ದಾತುರಂ ಪೋಗದೆನ್ನೊಲಿದಂತೆ ಮಾಡು ನಿ
ನ್ನಯ ಬೆನ್ನ ಬಿಡೆವೆಂದರು ॥ ೪೨

ಬಳಿವಿಡಿದು ಬಂದು ಮಾಡುವುದೇನು ನಮ್ಮ ಬೆಂ
ಬಳಿಯಲೆನಿಬರು ಹೊಲೆಯರಿಲ್ಲೆಂದಡಹಗೆ ಬಿಡೆ
ವೆಳಸಿ ಮಚ್ಚಿಸಿ ಮರುಳ್ಗೊಳಿಸಿ ಮತ್ತೊಲ್ಲನೆವ
ನಿಪನೆಂದು ಮೊಱೆಯಿಡುತ್ತ।
ಇಳೆಯೊಳಗೆ ಸಾಱುತ್ತ ದೂಱುತ್ತ ಬಪ್ಪವೆನೆ
ಮುಳಿದು ಘುಡುಘುಡಿಸಿ ಕೋಪಾಟೋಪದಿಂ ಹಲ್ಲ
ಕಳೆ ಬಾಯ ಹಱಿ[ಯು] ಹೊಯ್ ಹೊಡೆಹೊಡೆಯೆನುತ್ತಿದ್ದ
ನುರವಣಿಸಿ ಭೂನಾಥನು ॥ ೪೩

ತುಡುಕಿ ಚಮ್ಮಟಿಗೆಯಿಂ ಸೆಳೆದು ಪ್ರಧಾನ ಬಳಿ
ವಿಡಿದೇಳಲೊಬ್ಬರೊಬ್ಬರನು ಬೆನ್ನೊಡೆಯೆ ಮುಡಿ
ಹುಡಿಯೊಳಗೆ ಹೊರಳೆ ಹಲು ಬೀಳೆ ಬಾಯೊಡೆಯೆ ಮೆಯ್
ನೋಯೆ ಕೈಯುಳುಕೆ ವಿಾಱೆ।
ಪಡೆದಲ್ಲಿ ನಡೆದು ಹೊಕ್ಕಲ್ಲಿ ಹೊಕ್ಕೋಡಿಹೋ
ದೆಡೆಗೆ ಬೆನ್ನಟ್ಟ ರುಧಿರಂ ಬಸಿಯೆ ಹೊಯ್ದು ಹೊಗ
ಳ್ದುಡುಗಲರಸಂ ತಿರುಗಲತ್ತಲವರೋಱಲುತ್ತ
ಹರಿದರಾ ಮುನಿಪನೆಡೆಗೆ ॥ ೪೪

ಬಿಡುಮುಡಿಯ ಸುರಿವ ಕಂಬನಿಪ್ರೊನಲ ಕಳೆದೆಳಲು
ವುಡುಗೆಗಳ ಬೆನ್ನೊಡೆದು ಹನಿವ ರಕುತದ ಹೊಯ್ಲ
ಕುಡಿಯಳ್ಳೆಗಳ ಹರಿವ ಕಾಲುಗಳ ಮರಳೆ ನೋ
ಡುವ ಹೆದಱುಗಣ್ಣ ತೃಣವ।
ತುಡುಕಿ ನೆಗಹಿದ ಕೈಯ ನಿಷ್ಕಾರಣಂ ನೃಪತಿ
ಹೊಡೆದನೆಲೆ ಕೌಶಿಕಮುನೀಂದ್ರ ವೊಱೆಯೋ ಎಂಬ
ನಿಡುಸರದ ಮಡದಿಯರ ದನಿಯನಾಲಿಸಿ ಪರ್ಣ
ಶಾಲೆಯಂ ಹೊಱಮಟ್ಟನು ॥ ೪೫

ಆರ ಮನೆಯವರೆಂದು ಕೇಳ್ದಡೆರಡನೆಯ ಪುರ
ವೈರಿ ವಿಶ್ವಾಮಿತ್ರಮುನಿಯ ಮನೆಯವರೆಂದ
ಡಾ ರಾಯನೆದ್ದು ಕೈಯಾರೆ ಸದೆಬಡಿದನೆ
ಮ್ಮಂ ನಿರಪರಾಧಿಗಳನು।
ಕಾರುಣ್ಯಚಿತ್ತದಿಂ ಕಳುಹಿ ಕೊಲಿಸಿದೆ ತಂದೆ
ಯೋರಂತೆ ಕೇಳೆಂದು ವೊಱೆಯಿಟ್ಟಡೆನ್ನಯ ಮ
ನೋರಥಂ ಕೈಸಾರ್ದುದೆಳಲಬೇಡೆಂದು ಕೋ
ಪಾಟೋಪದಿಂ ಹರಿದನು ॥ ೪೬

## ೫. ರಾಜ್ಯಸರ್ವಸ್ವದಾನ

ವಡಬಾಗ್ನಿ ಜಡೆವೊತ್ತುದೋ ಸಿಡಿಲು ಹೊಸ ಭಸಿತ
ವಿಡಕಲಿತುದೋ ಕಾಡ ಕಿಚ್ಚು ಕೃಷ್ಣಾಜಿನವ
ನ್ನುಡಕಲಿತುದೋ ಪ್ರಳಯವಹ್ನಿ ತಪವಿರ್ದುದೋ
ಭಾಳಲೋಚನನ ಕೋಪ।
ಕಡುಗಿ ಮುನಿಯಾಯ್ತೊ ಹೇಳೆನೆ ಕಣ್ಣ ಕಡೆ ತೋರ
ಗಿಡಿಗೆದಱೆ ಮೀಸೆಗೂದಲು ಹೊತ್ತಿ ಹೊಗೆಯೆ ಬಿಱು
ನುಡಿಗಳ್ಸುರಿಯುಗುಳೆ ವಿಶ್ವಾಮಿತ್ರನ್ಸುರವಣಿಸಿ
ಬಂದನ್ನವನೀಶನೆಡೆಗೆ ॥ ೧

ಬಿಱುಗಾಳಿಯುಂ ಬೀಸಲಮ್ಮನ್ನನಿಲಂ ಸುರಪ
ನ್[1]ಱೆ[1]ವಳೆಗಳ್ ಕಱೆಯಲಮ್ಮನ್ನತಿ ಕಡುವಿಸಿಲ
ಕಱೆಯಲಮ್ಮಂ ತರಣಿ ದಾವಾಗ್ನಿ ಮೇರೆಯಂ
ಮೀಱಲಮ್ಮಂ ಲೋಕವ।
ಮುಱಿವ ಜವಗಿವನ ದೂತರುಗೀತನೆಂಬರೆ
ದ್ವಿಜಗಳಮ್ಮರು ತಪೋವನದೊಳೆಂದೆಮ್ಮ ನೀಂ
ಕೊಱಚಾಡಲೆಂದು ಬೀಡಂ ಬಿಟ್ಟೆಯ್ಸುರಿಧರಿದು
ನಿನ್ನ ಧೀವಶವೆಂದನು ॥ ೨

1 ಱ (ಕ.ಖ.ಗ.ಘ.)

ಎಳಸಿ ಪುಣ್ಯಾರ್ಥದಿಂ ವಂದನೆ ನಿಮಿತ್ತ ಗುರು
ನಿಳಯಕ್ಕೆ ಶಿಷ್ಯನೆಯ್ತಪ್ಪುದಕೆ ಸಾಹಸದ
ಬಲವೇಕೆ ತಂದೆಯೆನೆ ನುಡಿಯೊಳು ನಯಂಬಡೆದು
ಕಾರ್ಯದೊಳು ಗುರುವಿನೆಸುಗೆ।
ಮುಳಿದು ಸರ್ವಸ್ವಾಪಹರಣವಂ ಮಾಳ್ಪ ಕಡು
ಗಲಿತನವಿದಾವ ಪುಣ್ಯವ ಪಡೆವ ಶಿಷ್ಯತನ
ದೊಳಗು ಪೇಳೆನಲೆನ್ನ ದೆಸೆಯಿಂದ ಕೆಟ್ಟುದೇ
ನೆಂದನು ಹರಿಶ್ಚಂದ್ರನು ॥ ೩

ಅರಸುಗಳಿಗುಪದೇಶವಂ ಮಾಡಿ ವಸ್ತುವಂ
ನೆರಹಬಲ್ಲವನಲ್ಲ ನಿಜವೈರವಂ ಬಿಟ್ಟು
ಹರುಷದಿಂದೀರ್ಪ ಮೃಗಸಂಕುಳಂ ಸರ್ವಋತು
ಗಳೊಳು ಫಲವಿಡಿದೊಱಗುವ।
ತರುಕುಲಂ ಬತ್ತದೊಂದೇ ಪರಿಯಲಿಹ ಸರೋ
ವರವೆಂಬ ಧನವಿದೆಲ್ಲವನಿಱಿದು ಮುಱಿದು ಕುಡಿ
ದುರೆ ಮಾಳ್ಪ ಬಲುಹು ಸರ್ವಸ್ವಾಪಹರಣವ
ಲ್ಲದೆ ಬಳಿಕ್ಕೇನೆಂದನು ॥ ೪

ಬಱುಮುನಿ ಸನಿಟ್ಟು ಕೊಂಡೞುಹುವಂತಾಗಿ ನಾ
ನಿಱಿದ ಮೃಗ ಮುಱಿದ ಮರ ಕುಡಿದ ಕೊಳನಾವುದೆಲೆ
ಕೆಱುಜಡೆಯ ನೀತಿವಿದ ತೋಱುಸೆನೆ ಘುಡುಘುಡಿಸು
ತೆದ್ದು ಹಳಗ್ಗಾಲ್ದಂದು।
ಅಱಿತ ಕೊಳನಂ ಕೊಳೆತು ಮುಱಿದ ಮರನಂ ನೃಪನ
ನುಱಿ ತಂದ ಹಲವು ಗಾಯದ ಹಂದಿಯಂ ತೋಱಿ
ಜಱಿದು ನೀನೆನ್ನಾವ ನೆವವನೊಡ್ಡುವೆ ಪಾಪಿ
ಎನುತ ಮತ್ತಿಂತೆಂದನು ॥ ೫

ಹಿಂದೆ ಸಂಪದದೊಳುಱೆ ಗರ್ವದಿಂ ಮೆಱೆದ ಸಂ
ಕ್ರಂದನನ ಸಿರಿಯ ನೀರೊಳಗೆ ನೆರಹಿದ ಮುನಿಪ
ನಂದವಂ ಮಾಡುವೆನು ಹರನ ಹಣೆಗಣ್ಣ ಹ
ಗ್ಗಿಯನು ಹಗೆಗೊಂಬಂದದಿಂ ।
ಇಂದೆನ್ನ ಹಗೆಗೊಂಡೆ ಬಿಟ್ಟ ಬೀಡೆಲ್ಲಮಂ
ಕೊಂದು ಕೂಗಿಡಿಸಿ ನೆಱೆ ಸುಟ್ಟು ಬೊಟ್ಟಿಡುವೆನಾ
ರೆಂದಿರ್ದೆ ನಿನ್ನ ಗುರು ಹೇಳನೇ ತನ್ನ ಸುತ
ರ್ಕಳ ತಿಣ್ಣವನೆಂದನು ॥ ೬

ಒಸೆದು ಹುಟ್ಟಿಸುವ ಪಾಲಿಸುವ ಮರ್ದಿಸುವ ಸ
ತ್ವಸಮರ್ಥನೆನಿಪ ನೀನೇ ತಪ್ಪ ಹೊಱಿಸಿ ದ
ಟ್ಟಿಸುವಡೆನ್ನುತ್ತರಿಸಿ ಶುದ್ಧವಹುದರಿದಯ್ಯ
ನಿಮ್ಮ ಕರುಣದ ತೊಟ್ಟಿಲ ।
ಹಸುಳೆಯಾಂ ಸರ್ವಾಪರಾಧಿಯಾಂ ತಂದೆ ಕರು
ಣಿಸು ದಯಂಗೆಡದಿರುದ್ರೇಕಿಸದಿರೆಂದು ಪದ
ಬಿಸರುಹದ ಮೇಲೆ ಕೆಡಹಿದನು ನಿಜಮಣಿಮುಕುಟ
ಮಂಡಿತಶಿರೋಂಬುಜವನು ॥ ೭

ನೋಡಿ ವಂದಿಸಿ ಹೋಹ ಶಿಷ್ಯಂಗೆ ನೀಂ ಕೃಪೆಯ
ಮಾಡುವುದು ಹದುಳದಿಂ ಬಲವನೆಲ್ಲವ ಹೊಳ್ಳು
ಮಾಡಬಗೆವರೆ ಹೇಳೆನಲು ಪ್ರಳಯಫಣಿಯುಣಲ
ಹೊಳಲೊಳಗೆ ಕೈಯ ನೀಡಿ ।
ದಾಡೆಯಂ ಮುಱಿಯಬಗೆವಂತೆನ್ನ ಬಸುಱಿಂದ
ಮೂಡಿರ್ದ ಕನ್ನೆಯರ ಚೆನ್ನೆಯರನಬಲೆಯರ
ಗಾಡಿಕಾತಿಯರನಱಿದಱಿದಿಂತು ಸಾಯ ಸದೆ
ಬಡಿವರೇ ಹೇಳೆಂದನು ॥ ೮

ಬೇಗದಲಿ ನಿಮ್ಮ ಮನೆಯವರೆಂದು ಮೊಱೆಯಿಟ್ಟ
ರಾಗಿ ಕರುಣಿಸಿ ಬಿಟ್ಟೆನಲ್ಲದಿರ್ದಡೆ ಕೆಡಹಿ
ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟುವೆಳ
ಸುವೆ ಬಟ್ಟಬಯಲೊಳೆನಲು ।
ಏಗೆಯ್ದರವರೊಳನ್ಯಾಯವೇನೆನಲೆನ್ನ
ಮೇಗಿರ್ದ ಸತ್ತಿಗೆಯನೀಯ್ದುಲ್ಲದೊಡೆ ಗಂಡ
ನಾಗು ನೀನಾಗದೊಡೆ ಮೊಱೆಯಿಡುವೆನೆಂದರು ಮು
ನೀಶ ಚಿತ್ತೈಸೆಂದನು ॥ ೯

ಹೊಡೆಯ್ದುದಕ್ಕೇನವದಿರಂ ಹೊಡೆದ ಕೈಗಳಂ
ಕಡಿವೆ ನಿನ್ನಂ ನಚ್ಚಿ ಮಲೆತ ದೇಶವನುರುಹಿ
ಸುಡುವೆನಾ ದೇಶಕ್ಕೆ ಹಿತವಾಗಿ ಬಂದ ಮುನಿ
ಯಂ ಮುಱಿವೆನಾ ಮುನಿಯನು ।
ಹಿಡಿದು ಕದನಕ್ಕೆಂದು ಬಂದಸುರರಂ ಕೆಡಹಿ
ಹುಡುಕುನೀರದ್ದುವೆನ್ನಳವನಱಿಯಾ ಮುನ್ನ
ತೊಡಕಿ ತನಗಾದ ಭಂಗಂಗಳಂ ಹೇಳನೇ
ನಿನಗೆ ಕಮಲಜಕಂದನು ॥ ೧೦

ತಱಿಸಂದ ಮುನಿಯ ಕೋಪದ ಕಿಚ್ಚಿನುಬ್ಬರದ
ಬಿಱುಬನಱಿದತಿತೀವ್ರತರವಾಯಿತೆನ್ನ ಕಿಱು
ದಱಿಲಿ ತಗ್ಗುವುದಲ್ಲ ಗರ್ವಿಸುವುದುಚಿತವ
ಲ್ಲೆಂದು ವಸುಧಾಧೀಶನು ।
ಅಱಿಯದನ್ಯಾಯಮಂ ಮಾಡಿದೆನೆದೊಮ್ಮೆಂಗೆ
ನೆಱೆದ ಕೋಪಾಗ್ನಿಯಂ ಬಿಡು ತಂದೆಯೆಂದು ಧರೆ
ಗುಱುವ ಸತಿಸುತವೆರಸಿ ಪೊಡವಟ್ಟಡಣಕಿಸಿದ
ನಾಸುರದ ಕೋರಡಿಗನು ॥ ೧೧

ಕ್ರೋಡದಂಜದೆ ಲೆಕ್ಕಿಸದೆ ಬಂದು ಬನದೊಳಗೆ
ಬೀಡ ಬಿಟ್ಟನಿಮಿತ್ತವನ್ಯಾಯಕೋಟಿಯಂ
ಮಾಡಿ ಮಕ್ಕಳುಗಳಂ ಸಾಯ ಸದೆಬಡಿದುದ
ಲ್ಲದೆ ಬನ್ನವೆತ್ತಿ ಹಲವು ।
ಕೇಡುಮಾತುಗಳಿಂದ ಕಡೆನುಡಿದು ಮತ್ತೀಗ
ಬೇಡ ಕೋಪವನ್ನುಡುಗು ತಂದೆ ಎಂದೆನೆ ನಿನ್ನ
ಕೋಡ ಕೊಱೆಯದೆ ಬಱಿದೆ ಬಿಟ್ಟಪೆನೆ ಎಲವೊ ಕೇ
ಳೆಂದನಾ ಮುನಿನಾಥನು ॥ ೧೨

ಕ್ರೂರಕೃತ್ಯಧಮರುದ್ರೇಕಿಗಳು ದುರ್ಜನಾ
ಕಾರರುಂ ಧೂರ್ತರೊಳಗಾಗಿ ಶರಣೆನಲು ನಿಜ
ವೈರವಂ ಬಿಡುವರೆಂಬಾಗ ನೆಱೆ ಸರ್ವಸಂ-
ಗನಿವೃತ್ತರೆನಿಪ ನಿಮಗೆ ।
ಓರಂತೆ ಬೇಡಿಕೊಳುತಿಪ್ಪೆನ್ನ ಮೇಲೆನಿತು
ಕಾರುಣ್ಯವೇಕಿಲ್ಲ ತಂದೆ ಎನಲೆನ್ನಯ ಕು
ಮಾರಿಯರ ಮದುವೆಯಾಗಲ್ಲಾ ನಿರೋಧಮಂ
ಬಿಡುವೆನೆಂತೀಗೆಂದನು ॥ ೧೩

ವಿವಿಧ ಗುರ್ವಾಜ್ಞೆಯೊಳು ಮಾಡುವವು ಕೆಲವು ಮಾ
ಱುವವು ಕೆಲ[ಪಾ] ಕಾರ್ಯಮುಳ್ಳವಂ ಮಾಳ್ಪುದುಳಿ
ದವ ಬಿಡುವುದೈಸಲೇ ಗುರುಭಕ್ತಿಯೆಂದೆನಲು
ಮುನಿಪ ನೀನೆನ್ನ ಮನದ ।
ಹವಣನಾರಯ್ಯಲೆಂದೆನುಗೆಯ್ದುದಲ್ಲದೇ
ನವನರಕಮುಂ ಮಾಡ ಹೇಳಿದವರುಂಟೆ ನಿ
ಮ್ಮವನು ನಾ ನಿಮ್ಮ ಮನದೆನುವನೆಱಿಯೆನೆ ಮುನಿಪ
ಕೇಳೆಂದನವನೀಶನು ॥ ೧೪

ಒತ್ತಿ ನಿನ್ನಯ ಮನದ ಹವಣಱಿಯಲೆಂದು ನುಡಿ
ಯಿತ್ತಿಲ್ಲ ತಾತ್ಪರ್ಯವಾಗಿ ನುಡಿದೆವು ನಿನ್ನ
ಚಿತ್ತದಲಿ ಶಂಕಿಸದೆ ಮದುವೆಯಾಗೆಂದು ಕೌ
ಶಿಕಮುನೀಂದ್ರಂ ನುಡಿಯಲು ।
ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವ
ವೆತ್ತ ಸತಿಯರ್ಗೆಳಸಿ ಘೋರನರಕಾಳಿಗಿನಿ
ಮಿತ್ರ ಹೋಹವನಲ್ಲ ಬೆಸಸಬೇಡಿದನೆಂದು
ಭೂಭುಜಂ ಕೈಮುಗಿದನು ॥ ೧೫

ಬಿಡದೆ ಸತಿಯರ ಹೊಲೆಯರೆಂಬ ನೆವವೇಕವರ
ಹಡೆದೆನ್ನನೇ ಹೊಲೆಯನೆಂದಾಡಿದಾತನೆಂ
ದಡೆ ಭಸಿತಧರನೆನಲು ರುದ್ರನಂ ಬಯ್ದವನೆ
ಮುನಿಪ ಹೊಲೆಗೆಱಿಯ ಜಲದ ।
ನಡುವೆ ಬಿಂಬಿಸುವ ರವಿ ಹೊಲೆಯನೇ ಕಮಲಭವ
ನೊಡನೆ ಹುರುಡಿಸಿ ಬೇಱೆ ಸರ್ವಜೀವರ ಮಾಡು
ವೆಡೆಯೊಳಾ ಜೀವರೊಳಗಾದವನೆ ನಿಮ್ಮ ಹವ
ಣಱಿಯದಾಡಿದಿರೆಂದನು ॥ ೧೬

ಅಂಬುಧಿಪ್ರಜಪರಿಮಿತಾವನೀತಳದೊಳಾ
ಡಂಬರದ ಕೀರ್ತಿಯಂ ತಳೆವ ನಾನಾಮುನಿಕ
ದಂಬಾಧಿನಾಥ ವಿಶ್ವಾಮಿತ್ರಮುನಿಸುತೆಯ
ರಂ ಜಗಚ್ಚಕ್ಷುವೆನಿಪ ।
ಅಂಬುಜಪ್ರಿಯಕುಲಲಲಾಮನವನೀಶನಿಕು-
-ರುಂಬಾಧಿಪತಿ ಹರಿಶ್ಚಂದ್ರರಾಯಂ ತಂದ
ನೆಂಬೊಂದು ತೇಜಮಂ ಕೊಡಬೇಕು ಭೂಪ ಕೈ
ಮುಗಿದು ಬೇಡಿದೆನೆಂದನು ॥ ೧೭

ಎಡೆವಿಡದೆ ಬೇಡಿ ಕಾಡುವಿರಾದಡೆನ್ನ ಕೇಳ್
ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ
ಕೊಡಹಡೆವೆನ್ನಸಲ್ಲದೀಯೊಂದು ತೇಜಮಂ
ಕೊಡೆನೆಂದು ಭೂಪಾಲನು ।
ನುಡಿಯಲು ತಥಾಸ್ತು ಹಡೆದೆಂ ಹಡೆದೆನವನೀಶ
ರೊಡೆಯ ದಾನಿಲಲಾಮ ಸತ್ಯಾವತಂಸ ಎಂ
ದೆಡೆವಿಡದೆ ಹೊಗಳಿ ಬಿಡದಾಘೋಷಿಸಿದನು ಸಂ-
-ಗಡದ ಮುನಿವರರು ಸಹಿತ ॥ ೧೮



ಇಂತೆನ್ನ ಕಾಟಕ್ಕೆ ಬೇಸತ್ತು ನೀನೊಬ್ಬ
ನೆಂತಕ್ಕೆ ಕೊಟ್ಟೆನೆಂದಡೆ ಬಿಡೆನು ನೃಪ ನಿನ್ನ
ಕಾಂತೆ ಸುತ ಮಂತ್ರಿಗಳ ಮತ ಬೇಹುದವರುಗಳ
ನೊಡಬಡಿಸು ಬೇಗನೆನಲು ।
ಭ್ರಾಂತಮುನಿ ನಾನೊಬ್ಬ ಸಾಲದೇ ಸ್ತ್ರೀಬಾಲ
ರಿಂತಾದಡಂ ನುಡಿವರವರಿಚ್ಛೆಯೇ? ಎನ್ನ
ಸಂತಸದಿ ಕೋಯೆಂದಡದಱ ಮಾತಂ ಬಿಟ್ಟು
ಧಾರೆಯಂ ತಾ ಎಂದನು ॥ ೧೯

ಅಡವಿಯಂ ವೊಗೆದು ಸುಡುವಗ್ನಿಗಾಪೋಶನದ
ಗೊಡವೆಯೇವುದು ಬಲಾತ್ಕಾರದಿಂ ಕೊಂಬಿರಾ
ದಡೆ ಧಾರೆಯೇಕಯ್ಯ ಧಾರೆಗೊಡದಿರೆ ಮರಳಿ
ನೀಂ ಬಿಡುವುದುಂಟೆ ಎನಲು ।
ಬಿಡುವೆನೆನ್ನಯ ಮಕ್ಕಳಂ ಮದುವೆಯಾಗೆಂದ
ಡಡಿಗಡಿಗೆ ಕೆಟ್ಟ ನುಡಿಯಂ ನುಡಿಯುತಿರಬೇಡ
ಹಿಡಿಯೆಂದು ಸರ್ವಸಾಮ್ರಾಜ್ಯಮಂ ಮುನಿಗೆ ಧಾ
ರೆಯನೆಱೆದನವನೀಶನು ॥ ೨೦

ಏನೇನನೆಱೆದೆ ಧಾರೆಯನೆನಲು ಚತುರಂಗ
ಸೇನೆಯಂ ಸಕಲಭಂಡಾರವಂ ನಿಜರಾಜ
ಧಾನಿಯಂ ಜಗದಾಣೆ ಘೋಷಣೆಯುಮಂ ಕಟಕ
ವನು ಸಪ್ತದ್ವೀಪಂಗಳ ।
ಆನಂದದಿಂದಿತ್ತೆನೆನ್ನು ಸರ್ವಾನುಸಂ
ಧಾನವಂ ಬಿಟ್ಟು ಕರುಣಿಸಿ ಹರಸುತಿಹುದೆಂದು
ಭೂನಾಥನೆಱಗಿ ಬೀಳ್ಕೊಂಡಡಣಕಿಸಿ ನಗುತ
ಹೋಗಯ್ಯ ಹೋಗೆಂದನು ॥ ೨೧

ಹರಣವಂ ಬೇಡದುಳುಹಿದನು ಲೇಸಾಯ್ತು ಮುನಿ
ಕರುಣಿಸಿದನೆಂದು ತಲೆದಡವಿಕೊಳುತುತ್ಸವದೊ
ಳುರವಣಿಸಿ ರಥವೇಱಿ ನಡೆಗೊಳಲು ಬಂದು ಹೋ
ಗೆಂದು ನುಡಿವೇಳ್ವೆನೆಂದು ।
ಹುರುಡಿಗನು ಮತ್ತೆ ಕರೆಯಲು ಮರಳಿ ಬಂದು ಚ
ಚ್ಚರ ಬೆಸಸು ಬೆಸನಾವುದೆಂದು ಧೀರೋದಾತ್ತ
ನೆರಡು ಕೈಮುಗಿಯಲಾ ಮುನಿ ನುಡಿದ ಕಷ್ಟವನ
ದಾವ ಜೀವರು ಕೇಳ್ವರು ॥ ೨೨

ಎಳಸಿ ನೀನೆನಗೆ ಧಾರೆಯನೆಱೆದ ಸರ್ವಸ್ವ
ದೊಳಗಣವು ನಿನ್ನ ತೊಡಿಗೆಗಳವಂ ನೀಡೆನಲು
ಕಳೆದು ನೀಡಿದಡೆನ್ನು ಮಂತ್ರಿ ಸತಿ ಸುತರ ತೊಡಿ
ಗೆಗಳ ನೀಡೇಗಳೆನಲು ।
ಕಳೆದು ಕೊಟ್ಟಡೆ ಮೇಲೆ ನೀವೆಲ್ಲರುಟ್ಟುಡಿಗೆ
ಗಳನು ನೀಡೆಂದಡವನೀವ ಪರಿಯಾವುದೆಂ
ದಳುಕಿ ಮನಗುಂದಿ ಚಿಂತಿಸುತ ಕೈಮುಗಿದಿರ್ಪ
ಭೂಪನಂ ಕಂಡೆಂದನು ॥ ೨೩

ಅವನಿಪರು ಮರುಳರೆಂಬುದು ತಪ್ಪದಿದಕುಪಾ
ಯವ ಕಾಣ್ಬುದರಿದೆ ನಾ ತೋಱಿದಪೆನೆಂದು ತ
ನ್ನವನೊಬ್ಬನುಟ್ಟ ಹಣ್ಣುಱುವೆ ಸೀರೆಯನೀಸಿ
ಕೊಂಡು ನಾಲ್ಕಾಗಿ ಸೀಳಿ ।
ಶಿವಶಿವ ಮಹಾದೇವ ಕರುಣವಿಲ್ಲದ ಪಾಪಿ
ಯವಿಚಾರದಿಂ ನೀಡೆ ನಾಚದೊಗಡಿಸದಳುಕ
ದವರೊಬ್ಬರೊಂದೊಂದನುಟ್ಟು ದಿವ್ಯಾಂಬರವ
ನಿತ್ತಡಲಸದೆ ಕೊಂಡನು ॥ ೨೪

ಮಿಸುಪ ಕಳೆಗಳನು ತೃಣಸಸಿಮುಖ್ಯ ಜೀವಿಗಳಿ-
ಗೊಸೆದೊಸೆದು ದಾನವಿತ್ತಂಬರವನುಳಿದ[1]ಮು[1]ಳ-
ಕ್ಷಿತಿಯಂತೆ ಸರ್ವ ತೊಡಿಗೆಗಳನಿತ್ತಂಬರವ
ನುಳಿದೆಱುವೆಯುಟ್ಟರಸನು ।
ಕುಸಿದು ಪೊಡಮಟ್ಟನ್ನು ಹೋಹೆನೈ ತಂದೆ ಸಂ
ತಸವೆ ನಿಮಗೆನಲಡ್ಡ ಮೋಱೆಯೊಳುದಾಸೀನ
ಮಸಕದಿಂ ಹೋಗೆಂದು ಹೋಗಬಿಟ್ಟಳುಪಿ ಮು
ತ್ತಾ ಕೈಯಲೇ ಕರೆದನು ॥ ೨೫

ಮನದೊಳರ್ಥದನೊಂದನಾಡಬೇಕಾದಡೆ
ಮುನಿಯಲೇ ಎನಲು ಮುನ್ನೇನನಾಡಿದಡೆ ನಾ
ಮುನಿದೆನೆಲೆ ತಂದೆ ಪೇಳೆನೆ ಬಹುಸುವರ್ಣಯಾ
ಗವ ಮಾಡಿದಂದು ನೀನು ।
ಎನಗೆ ದಕ್ಷಿಣೆಗಿತ್ತ ಧನವನೀವುದು ದೇಶ
ವನು ಬಿಟ್ಟು ಹೋಹಾತನನ್ಯ ಸಾಲವನು ನೆ
ಟ್ಟನೆ ಹೊತ್ತು ಹೋಗಲಾಗದು ನಿಲಿಸಲಾಗದಿ
ತ್ತೆಡೆಯನಿಡು ಬಳಿಕೆಂದನು ॥ ೨೬

1 ಒ (ಕ.ಗ.ಘ.)

ಅನುಗೆಟ್ಟ ಮರುಳೆ ನೀನೆಂದಲ್ಪದಕ್ಷಿಣೆಯ
ಧನವೆನಿತು ನಿನ್ನ ಮನದರ್ಥವೆನಿತಱಿಕೊಳ್ಳಿವು
ದನಿತರ್ಥವದೆ ಮೊದಲ ಭಂಡಾರದೊಳಗೆ ನೀ
ನಿನ್ನು ಬಳಲಿಸದಿರೆನಲು ।
ಕೊನೆವೆರಳನ್ನಲುಗಿ ತಲೆದೂಗಿ ಲೇಸೈ ನಿನ್ನ
ಮನಕೆ ಸರಿಯಿಲ್ಲ ಮಝ್ಝುಭಾಪು ಭಾಪ್ಪರರೆ ನೆ
ಟ್ಟನೆ ಕೊಟ್ಟು ಕಾಳೆ ಡೆದು ನುಡಿವ ನುಡಿ ಹಸನಾಯಿ
ತೆಂದು ಘೂರ್ಣಿಸಿ ನಕ್ಕನು ॥ ೨೭

ಕಡೆಗಣಿಸಿ ನಗಲೇಕೆ ತಂದೆಯೆನೆ ಧಾರೆಯಂ
ಕೊಡುವಾಗ ದಕ್ಷಿಣೆಯ ಧನವದಱೊ[1]ಳ್[1]ದೆಯೆಂದು
ನುಡಿದುದುಂಟೇಯೆನಲು ಹೇಱನೊಪ್ಪಿಸಿದವಂ
ಗಲ್ಲಿಯದು ಸುಂಕವೆನಲು ।
ಒಡಲಳಿದಡಂ ಸಾಲವಳಿಯದೆನ್ನಲೇ ಧರಣಿ
ಯೊಡೆತನಂ ಹೋದಡೇಂ ಸಾಲ ಹೋಹುದೆ ಮುನ್ನಿ
ನೊಡವೆಯಂ ಕೊಡು ಕೊಡದಡೆಲ್ಲವಂ ಮರಳಿ ಕೈ
ಕೊಳು ಬಱಿದೆ ಬಿಡೆನೆಂದನು ॥ ೨೮

ಜತ್ರಕನ ನುಡಿಗೆ ತೆಕ್ಕಿದನೆ ತೆರಳಿದನೆ ತಲೆ
ಗುತ್ತಿದನೆ ಸಡಿಪಡಲ್ಲಿಲ್ಲವಧಿಯಂ ಕೊಟ್ಟು
ಚಿತ್ತವಿತ್ತನುಸರಿಸಿ ಕೊಂಬಿರಾದಡೆ ತಂದು
ನಿರ್ಣಯಿಸಿ ಕೊಡುವೆನೆನಲು ।
ಹತ್ತು ದಿನವೆನಲು ಮುನಿಯಱಿನೆನಲರಸನಿ
ಪ್ಪತ್ತು ದಿನವೆನಲು ಯತಿ ದೊರಕವೆನೆ ನೃಪತಿ ಮೂ
ವತ್ತು ದಿನವೆನಲು ಋಷಿ ಯಾಗದೆನಲರಸ ನಾ
ಲ್ವತ್ತೆಂಟು ದಿನವೆಂದನು ॥ ೨೯

1 ಳ (ಪ.)

ಅಲ್ಲವೆಂದೆನ್ನ ನೀನಿತ್ತವಧಿ ಕಿಱಿದೇವ
ರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನ
ವಿಲ್ಲೊಬ್ಬ ತೆಱಕಾಱನಂ ಕೊಟ್ಟಡಾತಂಗೆ
ನಿರ್ಣಯಿಸಿ ಕೊಡುವೆನೆನಲು ।
ಬಲ್ಲಿದನನೊಬ್ಬನಂ ಕೊಡುವೆನಾತಂಗೆ ಧನ
ವೆಲ್ಲವಂ ನಿರ್ಣಯಿಸಿ ಕೊಡುವಂತಿರೆನಗಲ್ಲಿ
ಹೊಲ್ಲಹಂ ಸೂರುಳಂ ಸೂರುಳಿಡು ಬೇಗ ಕಾ
ಡದೆ ಕಳುಹಿದಪೆನೆಂದನು ॥ ೨೦

ಶಿವಪೂಜೆಯಂ ಮಾಡದವನು ಗುರ್ವಾಜ್ಞೆಗೆ
ಟ್ಟವನು ಪರಸತಿಗೆಳಸುವವನು ಪರರಸುಗೆ ಮುಳಿ
ವವನು ತಾಯುಂ ಬಗೆಯದವನು ತಂದೆಯನೊಲ್ಲ
ದವನು ಪರನಿಂದೆಗೆಯ್ವ ।
ಅವನು ಇಟ್ಟಗೆಯ ಸುಟ್ಟವನು ಬೇಗೆಯನಿಕ್ಕು
ವವನಧರ್ಮರನು ಬೆರಸುವವನು ಕುಲಧರ್ಮಗೆ
ಟ್ಟವನಳಿವ ನರಕದೊಳಗೆಳಿವೆನವಧಿಗೆ ನಿಮ್ಮ
ಧನವನೀಯದಡೆಂದನು ॥ ೨೧

ಮೇಲೆನ್ನ ನಾನಾಳ್ವ ದೇಶದೊಳು ಬೇಡದಂ
ತೋಲೈಸದಂತೆ ಕೃಷಿವ್ಯವಸಾಯವಂ ಮಾಡ
ಪಾಳಯಂಗಟ್ಟರದೆಯವಧಿಯೊಳು ಹೊನ್ನ ನಿ
ರ್ಣಯಿಸುವುದು ಬೇಗನೆನಲು ।
ಭೂಲೋಲನದಕೊಡಂಬಡಲು ಸಪ್ತದ್ವೀಪ-
ಜಾಲವೆಲ್ಲೆನ್ನವಱಿಂದ ಹೊಱಗಾವುದೆಂ
ದಾಲಿಸಲು ಹೇಮಕೂಟಂ ವಾರಣಾಸಿಗಳು
ಹೊಱಗು ಮುನಿ ಕೇಳೆಂದನು ॥ ೨೨

ಪ್ರಳಯಕ್ಕೆ ಹೊಱಗು ಕಲಿಕಾಲ ಹೊಗದಂತಕನ
ಸುಳಿವವಱಿಕೊಳಿಲ್ಲ ಕಾಮನ ಡಾವರಂ ಕೊಳ್ಳ
ಘುಳಿದ ಮಾಯೆಯ ಮಾತು ಬೇಡ ಪಾಪಂಗಳ
ಟಂ ನಾಟವನ್ಯಾಯದ ।
ಕಳಿಗೆ ತೆಕ್ಕವು ಮಾರಿಮೃತ್ಯುಗಿತ್ಯುಗಳ ಬಲೆ
ಗೊಳಗಾಗ[1]ದ[1]ಧಿಕಪುಣ್ಯದ ಬೀಡು ಮಂಗಳದ
ನಿಳಯ ಮುಕ್ತಿಯ ಮೂಲವೆನಿಸುವವು ಕಾಶಿ ಹಂ
ಪೆಗಳು ಮುನಿ ಕೇಳೆಂದನು ॥ ೩೩

ಅವಕೆ ವಿಶ್ವೇಶ್ವರ ವಿರೂಪಾಕ್ಷರೇ ಒಡೆಯ
ರವನಿಯೊಳಗಲ್ಲಿ ನಿನ್ನಾಜ್ಞೆಗಳು ಸಲ್ಲ ಬಱಿ
ಯ ವಿಚಾರ ಹೊಲ್ಲ ಹಂಪೆಗೆ ಹೋಹಡೆಡೆಯಿಲ್ಲ
ಕಾಶೀಪುರವನೆ ಸಾರ್ದು ।
ನಿವಗೆ ಕೊಡುವರ್ಥವಂ ಕೊಡುವೆನೆನ್ನಳಲಿಸದೆ
ಶಿವಮೂರ್ತಿ ಮುನಿನಾಥ ಕರುಣಿಸೆನೆ ಹೋಗು ವ
ಸ್ತುವ ಬೇಗ ಮಾಡೆಂದೆಡಡಿಗೆಱಗಿ ನಡೆದನಾ
ಧೈರ್ಯನಿಧಿ ಭೂಪಾಲನು ॥ ೩೪

ಬಿಟ್ಟು ಹೆದಱದೆ ಹೋಹ ನೃಪನ ಕಳೆಯಂ ಕಂಡು
ಕೆಟ್ಟೆನವನಿಯನೆಯ್ದೆ ಕೊಂಡಡಂತದನೊಡಂ
ಬಟ್ಟು ಶಪಥಕ್ಕೆ ಮೆಯ್ಗೊಟ್ಟನವನಲ್ಲಿ ಹುಸಿ
ಹುಟ್ಟದೆನ್ನಕಟ ನಾನು ।
[2]ನ[2]ಟ್ಟು ಕೋಟಲೆಗೊಂಡನಂತಕಾಲಂ ತಪಂ
ಬಟ್ಟ ಪುಣ್ಯವನೀವೆನೆಂದೆನೆದು ಹೋದಡೊಳ
ಗಿಟ್ಟುಕೊಂಬರೆ ಮುನಿಗಳೆನ್ನನೆಂದೋರಂತೆ
ಮಱುಗಿದಂ ಮುನಿನಾಥನು ॥ ೩೫

1 ವ (?); 2 ಕ (ಪ.)

ಕುಂದದೆ ವಸಿಷ್ಠನೊಳು ಮಲೆತು ಬೆಂಗೊಟ್ಟಳ್ಳೆ
ಹೆಂದದ ತಪಃಫಲವ ಹೋಗಾಡಿದಾತನೀ
ಬಂದನೆಂದೆನ್ನನೆಲ್ಲಾ ಮುನೀಶ್ವರರು ನಗ
ದಿರರೆಂದು ತನ್ನ ತಾನು ।
ಕೊಂದುಕೊಳಬಗೆದು ಮತ್ತೆಚ್ಚತ್ತು ಚಿತ್ತದಲಿ
ನೊಂದಡೇನಹುದಿವಕೆ ತಕ್ಕುದಂ ಕಾಣಬೇ
ಕೆಂದು ಚಿಂತಿಸಿ ನೋಡಿ ಮತ್ತೊಂದುಪಾಯಮಂ
ಕಂಡನಾ ನಿಷ್ಕರುಣನು ॥ ೩೬

ಪುರದ ವಿಭವದ ಜನದ ಸಿರಿಯ ಕೇರಿಗಳ ವಿ
ಸ್ತರದ ಕೈಗೆಯ್ದ ದುರ್ಗದ ಬಲ್ಲುಹ ತನ್ನ ಹಿರಿ
ಯರಮನೆಯ ಕೇಳೀವನದ ಲತಾಗೃಹದ ದೀ
ಹದ ಖಗಮೃಗಾವಳಿಗಳ ।
ವರಚಿತ್ರಶಾಲೆಗಳ ಧನಧಾನ್ಯಸಂಚಯದ
ಪರಮವನಿತೆಯರ ನಾನಾರತ್ನಕೋಶದು
ಬ್ಬರದ ಸೊಗಸಂ ಕಂಡು ಮನ ಮಱುಗದೇ ಪುರ
ಕೈಕೆಯ್ದು ನೋಡುವೆನೆಂದನು ॥ ೩೭

ಧರಣೀಶ ಬಂದು ಹೋಗೊಂದು ಮಾತುಂಟೆಂದು
ಕರೆದು ನಿನ್ನಂ ನಂಬಿ ನಾನು ರಾಜ್ಯಂಗೆಯ್ವ
ಭರದೊಳೆಱಿಯದೆ ಹೋದಡೆಲೆಮರುಳೆ ನಿನಗೆಲ್ಲಿ
ಯರಸುತನವೆಂದು ವಿರಾಱಿ ।
ಪುರದ ಬಾಗಿಲ ಬಲಿದು ಗದಱಿಕೊಂಡಬ್ಬರಿಸಿ
ಪರಿಜನಂ ಕಲುಗುಂಡ ಕಱೆಯುದಿರ್ದರೆನ್ನನೊ
ಯ್ದಿರಿಸಿ ಸರ್ವವನೊಪ್ಪುಗೊಟ್ಟು ಹೋಗೆಂದಡವ
ನಿಪನದನೊಡಂಬಟ್ಟನು ॥ ೩೮

ನಡೆ ರಥವನೇಱಿಕೊಳ್ಳೊಲ್ಲೆನೇಕೊಲ್ಲೆ ಪರ
ರೊಡವೆಯೆನಗಾಗದೇಕಾಗದಾನಿತ್ತನಿ
ತ್ತಡೆ ಕೊಳಲುಬಾರದೇಂಕಾರಣಂ ಬಾರದೆಮ
ಗಂ ಪ್ರತಿಗ್ರಹ ಸಲ್ಲದು।
ಕಡೆಗೆ ನಿನ್ನೊಡವೆಯಲ್ಲವೆಯಲ್ಲವೇಕಲ್ಲ
ಕೊಡದ ಮುನ್ನೆನ್ನೊಡವೆ ಕೊಟ್ಟ ಬಳಿಕೆನಗೆಲ್ಲಿ
ಯೊಡವೆಯೆಂದರರೆ ದಾನಿಗಳ ಬಲ್ಲಹನು ಮುನಿ
ಯೊಡನೆ ಸೂಳ್ನುಡಿಗೊಟ್ಟನು ॥ ೩೯

ಬೇಡಿಕೊಂಬೆಂ ಭೂಪ ಎನೆ ಬೇಡಬೇಡ ನಾ
ಮಾಡಿದುದನೆನ್ನ ಕಣ್ಣಾರೆ ನೋಡುವೆನು ನೀ
ನಾಡಂಬರದೊಳು ರಥವೇಱಿ ಚತುರಂಗಬಲ
ವೆರಸಿ ನಡೆ ತಂದೆ ಎನ್ನ।
ಕಾಡಬೇಡವಧಿ ಕಿಱಿದೆಡೆ ದೂರ ಹೊತ್ತು ಹೋ
ಗಾಡದಿರ್ದಡೆ ತನ್ನನೊಯ್ದು ಮೇರುವಿನ ತುದಿ
ಗೋಡನೇಱಿಸಿದಾತ ನೀನೆಂದು ಮುನಿಪತಿಗೆ
ಭೂಭುಜಂ ಕೈಮುಗಿದನು ॥ ೪೦

ಅಕ್ಕಱಿಂದಲ್ಲ ನೀನೋಡಿಹೋದಹೆಯೆಂಬ
ಕಕ್ಕುಲಿತೆಗೇಱಿಂದೆನ್ನೆಸೆಯೆನೆ ಬಲುಗಾಹ
ನಿಕ್ಕಯ್ಯ ಎನೆ ಕಾಹಿನವರು ನಿನ್ನವರೆಂದ
ಡವರು ಬೇಡಯ್ಯ ನಿನ್ನ।
ಮಕ್ಕಳಹ ಮುನಿಗಳಂ ಬೆಸಸೆನಲು ಬೆಸಸಿ ಮುನಿ
ರಕ್ಕಸಂ ರಥವೇಱಿ ಚತುರಂಗಬಲವೆರಸಿ
ಮಿಕ್ಕು ನಡೆದಂ ಸರ್ವಸಂಭ್ರಮದ ಸಡಗರಂ
ಮಿಗಲಯೋಧ್ಯಾಪುರಕ್ಕೆ ॥ ೪೧

## ೬. ರಾಜ್ಯಸಮರ್ಪಣ

ಧರೆ ಬಿರಿಯಲೆಲ್ಲೆಲ್ಲಿ ಱೀಷ್ಕನಂತನಿಸ್ಸಾಳದ
ಬ್ಬರವನಾಲಿಸಿ ಪುರದ ಕೇರಿಗಳನೊಪ್ಪೆ ಸಿಂ
ಗರಿಸಿ ಮನೆಮನೆಗಳೊಳ್ಳು ಗುಡಿತೋರಣಂಗಳಂ
ಸರದೆಗೆದು ಸಂಭ್ರಮದಲಿ।
ಅರರೆ ಕೋಟಾಕೋಟಿ ಕರಿತುರಗರಥ[1] ಪತ್ತಿ[1]
ಪರಿಜನಂವೆರಸಿ ಮತ್ತಾ ಹರಿಶ್ಚಂದ್ರ ಭೂ
ವರನನಿದಿರ್ಗೊಳಲು ನಡೆದರು ಶಶಿಯನಿದಿರ್ಗೊಂಡು
ಪೆರ್ಚ್ಚುವಂಭೋಧಿಯಂತೆ ॥೧

ಮುತ್ತಿ ಮುಸುಕಿದ ಹಲವು ಕೈದುಗಳ ಝಲ್ಲರಿಗ
ಳೊತ್ತಿನೊಳು ತಳಿತ ಬೆಳುಗೊಡೆಗಳೆಡುಕುಱ ನೆಳಲ
ಕುತ್ತುಱಿಸೊಳು ಡಾಳಿಸುವ ಚಮರಿಸೀಗುರಿಗಳೊ
ಗ್ಗಿನ ಕುಱುಹುವಿಡಿದು ನಡೆದು।
ಎತ್ತಿದ ಮೊಗಂ ನಿಲುಕಿನೋಳ್ಪ ಕಂಗಳು ಮುಗಿದು
ಹೊತ್ತ ಕೈಯುವಧಾರು ಜೀಯ ಎಂದೆಂಬ ನುಡಿ
ವೆತ್ತು ಹತ್ತಿರೆ ಬಂದು ಮುನಿಯ ಮೊಗವಂ ಕಂಡ
ಹೊತ್ತನಿನ್ನೇವೊಗಳ್ವೆನು ॥೨

---

1 ಪಂಥಿ (ಕ.), ಮಂದಿ (ಗ.), ಫೀಜು (ಘ)

ನಸುನನೆಯನಪ್ಪಿ ದಳಿಕುಳದಂತೆ ಕಡುಹಸಿದು
ಕಸುಗಾಯನಗಿದ ಗಿಳಿಗಳ ಬಳಗದಂತೆ ನಿ
ಟ್ಟುಸದೆ ವಿಷಮಂ ಸವಿದ ಶಿಶುವಿಸರದಂತೆ ಕೊರ ನಿ
ಡಂ ಕರ್ದುಕಿ ಚಂಚು ನೊಂದು।
ಕುಸಿದ ಪಿಕನಿಕರದಂತಾಸತ್ತು ಬೇಸತ್ತು
ಬಸವಳಿಯುತ್ತೆಂದು ಮಂದಿಗಳೊಳೈಱಿಸಿದರು ಮಾ
ಮಸಕದಿಂ ಪುರಜನಂ ಭೂಪನಂ ಹೊಲಗೆಟ್ಟ
ಕಱು ತಾಯನಱಸುವಂತೆ ॥ ೩

ಹಗಲೊಗೆದ ಚಂದ್ರಕಳೆಯಂತೆ ಬಿಱುವೈಶಾಖ
ವಗಿದ ಬನದಂತೆ ಬಿಸಿಲೊಳು ಬಿಸುಟ ತಳಿರಂತೆ
ಮೊಗ ಕಂದಿ ಕಳೆಗುಂದಿ ಯುಱುವೆಗ್ಗಪ್ಪಡವುಟ್ಟು
ರ್‍ಭಾಗವಳಿದ್ದೊಪ್ಪಗೆಟ್ಟು
ಮಗನರಸಿ ಮಂತ್ರಿಸಹಿತವನಿಪಂ ಹಿಂದೆ ದೇ
ಸಿಗನಂತೆ ಕೌಶಿಕನ ಕಾಹಿನೊಳು ಬರೆ ಕಂಡು
ಬಗೆ ಬೆದಱಿ ಹೊದ್ದಿ ಹೊಡೆವಟ್ಟು ಕಾಣಿಕೆಯ ಚಿ
ತ್ರೈಸು ಭೂಭುಜ ಎಂದರು ॥ ೪

ಎನಗರಸುತನ ಮಾದು ಹೋಗಿ ವಿಶ್ವಾಮಿತ್ರ
ಮುನಿಗಾದುದಾತನಂ ಕಂಡು ಕಾಣಿಕೆಯನಿ
ತ್ತನುದಿನಂ ಬೆಸಕೈವುದೆನಲೊಲ್ಲೆನಲು ಬೋ
ಧಿಸಿ ಬಲಾತ್ಕಾರದಿಂದ।
ಜನವ ಕಾಣಿಸಿ ಕಾಣಿಕೆಯ ಕೊಡಿಸಿ ಹಿಂದುಗೊಂ
ಡಿನಕುಲಲಲಾಮನೈಯ್ತಂದು ಪುರಮಂ ಹೊಕ್ಕು
ಮನದೊಳುತ್ಸವದ ಹೆಚ್ಚುಗೆಯುಳಿದು ನಿಂದ ಮಂ
ದಿಯ ನೋಡುತಂ ನಡೆದನು ॥ ೫

ನೂಕಿ ನಡೆದರಮನೆಯ ಹೊಕ್ಕು ಸಿಂಹಾಸನ
ಕ್ಕಾ ಕೌಶಿಕಂ ಬಂದು ಭೂಭುಜನ ಕೈಯ ಪಿಡಿ
ದೀ ಕಟಕವೀ ಕೋಟೆಯೀ ಕರಿಗಳೀ ತುರಗ
ವೀ ರಥಗಳೀ ಪರಿಜನ ।
ಈ ಕೋಶವೀ ಕಾಂತೆಯೀ ಕುವರನೀ ಮಂತ್ರಿ
ಯೀ ಕಾಮಿನೀಜನಂ ಮಱುಗದಂತಿರಸಾಗ
ಬೇಕೆಂದಡೆನ್ನ ಮಕ್ಕಳ ಮದುವೆಯಾಗು ಕಾ
ಡದೆ ಬಿಟ್ಟು ಹೋಹೆನೆಂದ ॥ ೬

ಪೆತ್ತ ತಾಯುಂ ಮಾಱಿ ಕೊತ್ತ ಕೊಂಬರೆ ಮೂಗ
ನಿತ್ತು ಕನ್ನಡಿಯ ನೋಡುವರೆ ಮಾಣಿಕದೊಡವ
ನೊತ್ತೆಯಿಟ್ಟೊಡೆದ ಗಾಜಂ ಹಿಡಿವರೇ ಕೋಪ
ದಿಂ ಸತ್ತು ಮದುವೆಯಹರೆ ।
ಕತ್ತುರಿಯ ಸುಟ್ಟರೞ[1] ಕುಱು[1] ಕಲನು ಗೆಯ್ವರೇ
ಚಿತ್ತೈಸು ಹೊಲತಿಯರ ನೆರೆದು ನಾನೋವದಿ
ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ
ಮುನಿನಾಥ ಹೇಳೆಂದನು ॥ ೭

ಒಲ್ಲದಿರಬೇಡ ಲೇಸೊಲ್ಲೆಯೇಕೊಲ್ಲೆಯೆ
ನ್ನಲ್ಲಿ ತಪ್ಪಿಲ್ಲಾದಡಿನ್ನು ನೀನೀಗ ನಿನ
ಗುಳ್ಳ ಪರಿವಾರಮಂ ಕರಸು ಬೇಗದಲಿಂತು
ಚತುರಂಗಬಲಸೇನೆಯ ।
ಸಲ್ಲಲಿತ ದೇಶಕೋಶವನು ಕಟಕವನವ
ಕ್ಕಳ್ಳ ಕುಲಕರಣ ದುರ್ಗಂ ಮುದ್ರೆ ಮೊದಲಾದು
ದೆಲ್ಲವಂ ಬಿಡದೊಪ್ಪುಗೊಟ್ಟು ಹೋಗೇಳೆನಲು
ಕರಸಿದಂ ಭೂನಾಥನು ॥ ೮

1 ಕರು (?)

ಬಾಡಿದ ಮೊಗಂ ಬಱತ ಬಾಯ್ ಸುರಿವ ನಯನಾಂಬು
ಪಾಡಳಿದ ಮತಿ ನೀಡಿ ಬೆಳೆದ ಸುಯ್ ದುಗುಡದ
ಕ್ಕಾಡುವಂಗಂ ನಿರೋಧಾಗ್ನಿಯಿಂ ಕುದಿದು ಮಱು
ಗುವ ಮನಂ ಮಾಸಿದ ಮುದಂ।
ಕೂಡೆ ಬಂಧ್ವಖಿಳಪರಿವಾರಮಂ ಸತಿಯುರಂ
ನಾಡೆ ಚತುರಂಗಬಲವಂ ಪುರಜನಂಗಳಂ
ನೋಡಿ ತೋಱಿಸಿ ಬೇಱಿವೇಱೊಪ್ಪುಗೊಡುತಿರ್ದ
ನಾ ಧೈರ್ಯನಿಧಿ ಭೂಪನು ॥೯

ಇದು ರತ್ನಭಂಡಾರವಿದು ಹೇಮಭಂಡಾರ
ವಿದು ಸುನಾಣೆಯವರ್ಗವಿದು ಪಟ್ಟಕರ್ಮಕ್ಕುಲ
ವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣ
ವಿದು ಸರ್ವಶಸ್ತ್ರಶಾಲೆ।
ಇದು ಹಸ್ತಿಸಂದೋಹವಿದು ತುರಗಸಂತಾನ
ವಿದು ವರೂಥಪ್ರಕರವಿದು ಪದಾತಿವ್ರಾತ
ವಿದ ನೋಡಿಕೋಯೆನುತೊಪ್ಪಿಸಿದನಾ ಮುನಿಗೆ
ಭೂನಾಥಕಂದರ್ಪನು ॥೧೦

ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವ
ಧರಮನೆಯಿದ್ದಖಿಳಪರಿವಾರವಿದು ಸಿವುಡಿಯಿದು
ಕರಣವಿದು ಮೇಲುಳ್ಳ ಸರ್ವಸ್ವವಿದು ನೋಡಿ
ಕೋ ಮಹಾಪುರುಷ ಎಂದು।
ವರಕೌಶಿಕಂಗೊಪ್ಪುಗೊಟ್ಟೆಲ್ಲ ಸಂದುದೇ
ಪರಿಣಾಮವೇ ಇನ್ನು ಹೋಹೆನೇ ಮುನಿನಾಥ
ಕರುಣಿಸಿದಿರೇ ಎಂದು ಪೊಡವಂಟು ಹೋಹರಸ
ನೊಡನೈದ್ದನಾ ಮುನಿಪನು ॥೧೧

ಪೊಱಮಡುವ ಭೂಪಾಲನಂ ಕಂಡು ಕಣ್ಗೆಟ್ಟು
ಮಱುಗಿ ಬಸುಱಿಂ ಹೊಸೆದು ಬಸವಳಿದು ಬಿಸುಸುಯ್ದು
ಮೊಱೆಯಿಟ್ಟು ಬಾಯ್ವಿಟ್ಟು ಕೈನೀಡಿ ಕರೆದು ಕ
ಟ್ಟೊಱಲಿ ಸೈರಿಸಲಾಱದೆ।
ನೆಱೆ ನಿನ್ನ ನಂಬಿ ನಚ್ಚಿರ್ದ ಪರಿವಾರಮಂ
ಮಱೆದೆಯೋ ತೊಱೆದೆಯೋ ಮಾಱಿದೆಯೋ ಪೇಳು ನೇ
ಸಱ ಕುಲಜ ಎಂದೆಂದು ನುಡಿನುಡಿದು ಮಿಡುಮಿಡನೆ
ಮಿಡುಕಿತ್ತು ಪೌರಜನವು ॥೧೭

ದಂತಿಯಿಂದಿಳಿದು ನಡೆದಱಿಯದವ ಬಱಿಗಾಲೊ
ಳೆಂತಡಿಯನಿಡುವೆ ಹಾಸಿನೊಳು ಪವಡಿಸುವಾತ
ನೆಂತು ಕಲುನೆಲದೊಳೊಱಗುವೆ ಸಿತಚ್ಛತ್ರ ತಂ
ಪಿನೊಳು ಬಪ್ಪಾತ ನೀನು।
ಎಂತು [1]ಬಱಿ[1]ಬಿಸಿಲನಾನುವೆ ಪುರದೊಳಿಪ್ಪಾತ
ನೆಂತರಣ್ಯದೊಳಿಪ್ಪೆ ಜನವನಗಲ್ದಱಿಯದವ
ನೆಂತು ಪೇಳೇಕಾಕಿಯಾಗಿಪ್ಪೆ ಎಂದು ಬಾ
ಯ್ವಿಟ್ಟುದು ಸಮಸ್ತಜನವು ॥೧೮

ಹೊಱಗೆ ದಾನವ ಬೇಡುವವರುಂಟೆ ಕೊಟ್ಟು ಬೇ
ಸಱದ ಮುಗುದರಸು ದೊರಕಿದನಲಾ ಎಂದು ಕ
[2]ಟ್ಟಱೆಗಂಡ[2] ಪಾಪಿ ನಿಷ್ಕರುಣಿ ನಿರ್ದಯ ಮೂರ್ಖ
ನೀಚ ನೀರಸ ನಿರ್ಗುಣ।
ನೆಱೆ ಕೊಂದೆ ನಂಬಿ ನಚ್ಚಿರ್ದರೆಮ್ಮೊಡಲೊ
ಳಿಱಿಯುತ್ತಿಪ್ಪಳಲ ಬೇಗೆಯ ಬೆಂಕಿಯುರಿ ನಿನ್ನ
ನಱಿಯದೇ ಹೇಳು ವಿಶ್ವಾಮೃತ್ಯುವಾದೆ ವಿ
ಶ್ವಾಮಿತ್ರ ಎನುತಿರ್ದರು ॥೧೯

1 ಬಱು (?) ; 2 ಟ್ಟೆಱೆಗಣ್ಣ (ಕ.ಗ.), ಟ್ಟಱೆಕಂಡೆ (ಖ.)

ಜಡೆಗಳೆದು ಮಕುಟಮಂ ನಾರಸೀರೆಯನು ತೊಱೆ
ದುಡಿಗೆಯಂ ರುದ್ರಾಕ್ಷಮಾಲೆಯಂ ಕಳೆದು ಮಣಿ
ದೊಡಿಗೆಯಂ ಕಂದಮೂಲವನೊಲ್ಲದೂಟಮಂ
ದರ್ಭೆಯಂ ಬಿಟ್ಟು ಸಿರಿಯನು
ಅಡವಿಯಂ ಬಿಟ್ಟು ನಗರಿಯ ಭಸಿತಮಂ ಬಿಟ್ಟು
¹ಕಡು¹ಸುಗಂಧಂಗಳ ಜಿತೇಂದ್ರಿಯತ್ವವ ಬಿಟ್ಟು
ಮಡದಿಯರ ಜಗವಱಿಯೆ ಕೂಡಲು ವ್ರತಕ್ಕೆ ಮು
ಪ್ಪಾಯ್ತು ಮುಪ್ಪಿನೊಳೆಂದರು ॥ ೧೫

ಮಲೆತು ಬೆನ್ನಟ್ಟುವ ಮಹಾರಿಷಡುವರ್ಗಮಂ
ಗೆಲಲಱಿಯದವನಾವ ಹಗೆಗಳಂ ಗೆಲುವೆ ನಿ
ನ್ನೊಳಗೆ ಕರಣವ ಸಂತವಿಡಲಱಿಯದವನಾವ
ದೇಶವಂ ಸಂತವಿಡುವೆ
ಸಲೆ ತಪಸ್ತೇಜದಿಂ ಪುರುಷಾರ್ಥಕೋಶಮಂ
ಬಳಸಲಱಿಯದನಾವ ತೇಜದಿಂ ಕೋಶಮಂ
ಬಳಸಿದಪೆ ಕಂಗೆಟ್ಟು ಕಡುಪಾಪಿ ಮೂರ್ಖ ಕೌ
ಶಿಕ ಕೇಳು ಕೇಳೆಂದರು ॥ ೧೬

ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿಪರಿವೃತಧರೆಯ ಸಿರಿಯ ಸೊಬಗಜ್ಞಾತ
ವಾಸಕ್ಕೆ ಪೋಗುತಿದೆ ಕೋ
²ಪೊರೆವ² ದೀನಾನಾಥರಾನಂದವಡಗುತಿದೆ
ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆಂದೊಂದಾಗಿ ಬಂದು ಸಂದಿಸಿ ನಿಂದ
ಮಂದಿ ನೆಱೆ ಮೊಱೆಯಿಟ್ಟುದು ॥ ೧೭

1 ಜಿಡೆ (ಖ.ಗ.ಘ.); 2 ಧರೆಯ (ಕ.ಗ.ಘ.)

ವಸುಧೆ ಬಾಯ್ಬಿಡೆ ದೆಸೆಗಳೆಸವಳಿದು ಮಱುಗೆ ನಿ
ಟ್ಟಿಸಲಾಱದಂಬರಂ ಕಂಬನಿಯನುಗುಳೆ ಶೋ
ಕಿಸುವ ಪರಿಜನದೆಳಲನಾಱಿಸುತ ಪಾಲಿಸುತ
ಸರದೋಱಿ ಸಂತವಿಡುತ।
ನೃಪಸಗಿ ಪುರವಂ ಮೀಱಿ ಹೋಗುತ್ತ ಹಿಂದೆ ಸಂ
ಧಿಸಿ ಬಪ್ಪ ಕೌಶಿಕನ ಕಂಡು ನಿಂದವನೀಶ
ನೊಸೆದು ನಿಲಿಸುವ ಭರದೊಳೊಂದೆರಡು ಮಾತನಾ
ಡಿದನದೇವಣ್ಣಿಸುವೆನು ॥ ೧೮

ಹಿಂದೆ ರಾಜ್ಯಂಗೆಯ್ವ ಗರ್ವದಿಂ ಹೊಲತಿಯರ
ತಂದು ಕುಲವಂ ಕೆಡಿಸಲಾಱದೆಳಲಿಂ ನಿಮ್ಮ
ನೊಂದೊಂದು ವಿಧದಿ ದಟ್ಟಿಸಿ ಜಱಿದು ಮಾಱುತ್ತ
-ರಂಗೊಟ್ಟು ಕೆಟ್ಟು ನುಡಿದು।
ನಿಂದೆಗೆಯ್ದನ್ಯಾಯ ಪಾಪಿ ಚಂಡಾಲನೆ
ನ್ನಿಂದಧಮರಾರಯ್ಯ ಸರ್ವಾಪರಾಧಿಯಾಂ
ತಂದೆ ಕರುಣಂಗೆಡದಿರೆಂದು ಮುನಿಯಂ ಬೇಡಿ
ಕೊಂಡನು ಹರಿಶ್ಚಂದ್ರನು ॥ ೧೯

ಮನದೊಳಗೆ ಮಱುಗದಿರಿ ಚಿಂತಿಸದಿರಳಲದಿರಿ
ಮುನಿಯದಿರಿ ನೋಯದಿರಿ ಧೃತಿಗೆಡದಿರೇಗಳೆರ
ಡನೆಯ ಶಿವನೆನಿಪ ಕೌಶಿಕನೊಡೆಯನಾದನಾ
ತನ ಪಾದಪಂಕಜಕ್ಕೆ।
ಎನಗೆ ಬೆಸಕೈವಂತೆ ಬೆಸಕೈವುದಂಜುವುದು
ವಿನಯಮಂ ನುಡಿವುದೋಲೈಸುತಿಹುದೆಂದು ಪರಿ
ಜನಕೆ ಕೈಮುಗಿದೆಯ್ದೆ ಬೇಡಿಕೊಂಡಂ ಧೈರ್ಯ
ನಿಧಿ ಹರಿಶ್ಚಂದ್ರನೃಪನು ॥ ೨೦

ಧರೆಗಧಿಕವೆನಿಪ ರವಿವಂಶದಿಕ್ಷ್ವಾಕು ಭೂ
ವರನು ಮೊದಲನ್ವಯಾಗತವಾಗಿ ಬಂದುದೀ
ಪರಿವಾರವೀ ದೇಶವೀ ನಗರವೆಂದುತನ
ಕ್ಷಾವೆಡರುಬಡತನವನು।
ನೆರೆದಜೀಯದಯ್ಯ ನೀವೆನ್ನಿದಂ ರಕ್ಷಿಪುದು
ಹೊರೆವುದೆನಿತಂ ಬೇಡಿ ಪಡೆದೆ ನಾ ನಿಮ್ಮಲ್ಲಿ
ಕರುಣಿಸೆನಗೆಂದು ಕೈಮುಗಿದು ಮುನಿಗೊಪ್ಪಯಿಸಿ
ಕೊಟ್ಟನು ಹರಿಶ್ಚಂದ್ರನು ॥ ೨೧

ಒಸೆದೀವ ತೆಜಿಕಾಜಿನ್ನಾರ್ಥಾತನಂ ನಿಯಾ
ಮಿಸು ತಂದೆ ಎನೆ ತನ್ನ ಶಿಷ್ಯಾಳಿಯೊಳು ನೋಡಿ
ಹುಸಿಯಸೂಯಾ ನೀಚವೃತ್ತಿ ನಿರ್ದಾಕ್ಷಿಣ್ಯ
ನಿಷ್ಕರುಣನೀತಿಗಳಲಿ।
ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾ
ನಿಸನ[1]ನೆಕ್ಕಟಿ[1]ಕರೆದು ಕೈವಿಡಿದು ಕಿವಿಯೊಡ್ಡಿ
ವಸುಧಾಧಿಪತಿಯ ಬಳಿವಿಡಿದು ಕಳುಹಲು ಬುದ್ಧಿ
ಗಲಿಸಿದನ್ನದೇವೊಗಳ್ವೆನು ॥ ೨೨

ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ
ನಡುವೆ ತಗಹಿನಲಿರಿಸಿ ಕೆಲವು ದಿನದುಪವಾಸ
ಬಡಿಸಿದುರ್ಜ ಕೆಲವು ದಿನ ದೇಹವನುವಲ್ಲೆಂದು
ನೆವವೊಡ್ಡಿ ಕೆಲವು ದಿವಸ।
ನಡೆವಾಗ ದಾರಿದಪ್ಪಿಸಿ ತಿರಿಪಿ ಕೆಲವು ದಿನ
ಪಡಿಯ ಬೀಯಕ್ಕಾಣೆಯಿಟ್ಟಂತು ಕೆಲವು ದಿನ
ಕೆಡಿಸಿ ನುಡಿದವಧಿಯಾಯ್ತೆಂದು ಧರೆಯಜೀಯೆ ನೃಪ
ನಂ ಹುಸಿಕನೆನಿಸೆಂದನು ॥ ೨೩

1 ನೆಬ್ಬಿಸಿ (ಕ.ಖ.ಗ.ಘ.)

ಕರುಣಿಸದಿರ್ದನುಗೊಡದಿರ್ದಗಲದಿರು ಅನುಸರಿಸ
ದಿರು ಬಟ್ಟೆಯೂರಲೆಡೆಗೆಯ್ಯದಿರು ಕಡೆಗಾವ
ಪರಿಯೊಳಾವಾವ ನಿಗ್ರಹದಿ ರೋಧಾಯಾಸ
ಬಡಿಸುವಂದದಿ ಮಾಳ್ಪುದು
ಗುರುಭಕ್ತನಾದಷ್ಟತಿಬುದ್ಧಿಯುಳ್ಳವನಾದ
ಧರಸನಂ ಕೆಡಿಸಿ ಹುಸಿತೋಱಿಂದಡೆನಗವಂ
ಕರಗುವನೆ ದೇವ ಎನಸೆ ನೇಮಕ್ಕೆ ನೀನಿಧಾಂ
ಬಂದು ಕಾಡುವೆನೆಂದನು ॥ ೨೪

ಬಿಸಿಲಾಗಿ ಬಿಱುಗಾಳಿಯಾಗಿ ಕಲುನೆಲನಾಗಿ
ವಿಷಮಾಗ್ನಿಯಾಗಿ ನಾನಾಕ್ರೂರಮೃಗವಾಗಿ
ಮುಸಗಿ ಘೋರಾರಣ್ಯವಾಗಿ ಗರ್ಜಿಸಿ ಕವಿವ
ಭೂತಬೇತಾಳರಾಗಿ ।
ಹಸಿವು ನೀರಡಿಕೆ ನಿದ್ರಾಲಸ್ಯವಾಗಿ ಸಂ
ದಿಸಿ ಹೋಗಿ ಹೊಕ್ಕಲ್ಲಿ ಹೊಕ್ಕು ಧಾವತಿಗೊಳಿಸಿ
ಹುಸಿಗೆ ಹೂಂಕೊಳಿಸುವೆಂ ಭೂಭುಜನನೆನ್ನಿಂದ
ಬಲ್ಲಿದರದಾರೆಂದನು ॥ ೨೫

ಬೇಱೊಬ್ಬನಲ್ಲೀತನೀ ಬಂದನಾಯಾಸ
ಕಾಱನತಿಗರುವನತಿಸುಖಿಯಿಾತನೆಂದುದಂ
ಮಿಾಱದಿರು ಧನವ ಕೊಡು ನಡೆಯರಸ ಹೋಗೆನಲು
ಮುನಿವರನ ಚರಣಕ್ಕೆಱಗಿ ।
ಸೀಱಿಸತಿಸುತಮಂತ್ರಿವೆರಸಿ ರಿಪುಬಲಸೂಱೆ
ಕಾಱನೊಲವಿಂ ತಿರುಗಿ ನಡೆವಾಗ ಮುಂದಿ ಬಾ
ಯಾಱುತ್ತ ಚೀಱುತ್ತ ಗೋಳಿಡುತ್ತಳುತೆದ್ದು
ನಡೆದುದೇವಣ್ಣಿಸುವೆನು ॥ ೨೬

ಜನನಿ ಹಿಂಗಿದ ಶಿಶುಗೆ ಸಸಿ ಬಿಟ್ಟ ಕುಮುದಕ್ಕೆ
ದಿನನಾಥನಿಳಿದ ಕಮಲಕ್ಕೆ ನೆಱೆ ಸಿರಿ ಸಮೆದ
ಮನೆಗೆ ಜೀವಂ ತೊಲಗಿದೊಡಲಿಂಗೆ ತೈಲವಿಂ
ಗಿದ ದೀಪ್ತಿಗುದಕವಱತ
ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆ
ಟ್ಟನೆ ಜೋಡಿಯಾದುದಾ ಪುರಜನಂ ಪರಿಜನಂ
ಜನಪತಿಹರಿಶ್ಚಂದ್ರನೆಲ್ಲವಂ ಮುನಿಗಿತ್ತ
ರಣ್ಯಕ್ಕೆ ನಡೆವಾಗಲು ॥ ೨೭

## ೭. ಪತ್ನೀಪುತ್ರವಿಕ್ರಯ, ಆತ್ಮವಿಕ್ರಯ

ಎಡೆವಿಡದೆ ದಾರಿಯುಱುಪಲು ಮಂತ್ರಿ ಮುಂದೆ ಸುತ
ನೆಡದ ದೆಸೆಯಲಿ ನಿಜಾಂಗನೆ ಹಿಂದೆ ಬರೆ ಭೂಮಿ
ಯೊಡೆಯನೊಡವೆಗಳೊಡೆತನಂಗಳನೊಡಂಬಟ್ಟು
ಮುನಿಗಿತ್ತ ಚಿಂತೆ ತನ್ನ ।
ಬಿಡೆ ದಕ್ಷಿಣವ ಬಿಟ್ಟು ದಕ್ಷಿಣಾರ್ಥಂಗಳಂ
ಕೊಡುವೆನೆಂಬುತ್ತರವನುತ್ತರಿಸಲುತ್ತರಂ
ಬಿಡಿದು ನಡೆದಂ ನೆರವನಾರುವಂ ಹಾರದಾ
ಧೀರ ಕಾಂತಾರದೊಳಗೆ ॥ ೧

ಸುತನನಡಿಗಡಿಗೆತ್ತಿಕೊಂಬ ನಡೆಗೆಡುವ ನಿಜ
ಸತಿಯನಡಿಗಡಿಗೆ ಬೋಳೈಪ ಬಳಲುವ ಚಮೂ
ಪತಿಯನಡಿಗಡಿಗೆ ಬಿಡದುಪಚರಿಪ ಚಿತ್ತದಾ
ವೇಶ[1]ದಗ್ರ[1]ದ ಭರದಲಿ ।
ಅತಿ ಬಿಸಿಲು ಗಾಳಿ ಕಲು ಮುಳು ಕ್ಷುತ್ಪಿಪಾಸೆ ಜಾ
ಡ್ಯತೆಗಳೆಂಬಿಂತಿವಱ ಕಾಟದಿಂ ಮೊಳೆವ ಧಾ
ವತಿಯನಱಿಯದೆ ನಡೆದನಕಟಕಟ ಭೂಮಿಪಂ
ಕಾಲಕ್ಕೆ ಕೈಮುಗಿಯುತ ॥ ೨

---

1 ದಾಗ್ರ (ಕ.ಖ.ಗ.), ಗ್ರಹ (ಘ.)

ಮಂದೈಪ ಬಿಸಿಲ ಬಿಸಿಯಿಂ ನೆತ್ತಿ ನೆಲನ ಬಿಸಿ
ಯಿಂದ ಕಾಲ್ ಕ[1]ಡೆಗಣಿ[1]ಸಿ ಕವಿವ ಕಾದೆಲರ ಬಿಸಿ
ಯಿಂದ ದೇಹಂ ಕ್ಷುಧಾನಲನ ಬಿಸಿಯಿಂದೊಳಗು
ತೃಷೆಯ ಬಿಸಿಯಿಂದ ಬಾಯಿ ।
ಬೆಂದು ಬಿರಿಧರಳುತ್ತ ಸಾಯುತ್ತ ನೋಯುತ್ತ
ನಿಂದು ನಡೆಧಳುಕುತ್ತ ಬಳುಕುತ್ತ ಬರಬರಲು
ಮುಂದೆ ಬಳಿಕೇವೊಗಳ್ವೆನಕಟ ನಿಷ್ಕರುಣಮುನಿ
ನೆನೆದ ಕುಟಿಲದ ಕುಂದನು ॥ ೩

ಕುತ್ತುಱಾಗಿರ್ದ ಹೆಮ್ಮಳೆಗಳಂ ಸುಡುತ ಬೆಳೆ
ವೆತ್ತ ಬೆಟ್ಟವ ಸೀಳ್ದು ಸೆಕ್ಕೆಗಳೆಯುತ್ತ ಹುಲು
ವೆತ್ತ ದರಿಗಳ ಕರಿಕುವರಿಸುತ್ತ ಬೆಳೆದ ಮರ
ದಿಡುಕುಱೊಳು ನಿಂದುರುಹುತ ।
ಹೊತ್ತುತ್ತ ಹೊಗೆಯುತ್ತ ಹಬ್ಬುತ್ತ ಹರಿದು ಸೆಗೆ
ಯುತ್ತ ಗಗನವನು ತುಡುಕುತ್ತ ಮುತ್ತಂತಡಿಸಿ
ಸುತ್ತ ಮುತ್ತಿತ್ತು ದಾವಾನಲನಸತ್ಯಕಾಂ
ತಾರದಾವಾನಲನನು ॥ ೪

ಮುಟ್ಟಿ ಕಾಶಿಯನು ಹೊಕ್ಕವನಲ್ಲ ಮುನಿರಿಣವ
ಕೊಟ್ಟಾತನಲ್ಲ ದಾನದ ಭೂಮಿಯಿಂದ ಪೊಱ
ಮಟ್ಟಾತನಲ್ಲಾಯು ತುಂಬಿ ಮಡಿದವನಲ್ಲ
ಹೋಹಡಾನೊಬ್ಬನಸುವ ।
ಬಿಟ್ಟಾತನಲ್ಲ ನಿಜಸತಿಸುತರ್ ಮಂತ್ರಿ ಸಹ
ನೆಟ್ಟಡವಿಯೊಳಗೆ ದಳ್ಳುರಿಹೊಯ್ದು ದುರ್ಮರಣ
ವಟ್ಟು ಹೋಹಂತಾದುದೇ ಎಂದು ನೃಪತಿ ಮಱು
ಗುತ್ತ ಮತ್ತಿಂತೆಂದನು ॥ ೫

1 ಡುಗಲಿ (ಕ.ಖ.ಗ.ಘ.)

ಕಡಗಿ ಕರ್ಬೊಗೆ ಸುತ್ತಿ ದಳ್ಳುರಿಗಳೆಲೆದು ಕೆಂ
ಗಿಡಿಗೆದರ್ದು ಕೆಂಡಂಗಳಡಸಿ ಸುಡೆ ಮಿಡುಮಿಡನೆ
ಮಿಡುಕಿ ಬಾಯ್ಬಿಟ್ಟೊದರಲಿ ಕೆಡೆದೊಡಲು ಮಡಿದು ಕೈ
ಕಾಲ್ ಬೆಂದು ಸುಕ್ಕಿ ಸುಗಿದು ।
ಮಡದಿ ಸುತರಳಿವುದನು ಕಣ್ಣಾರೆ ಕಂಡು ನಾಂ
ಕಡೆಯಲ್ಲುಳಿವುದರಿಂದ ಮುನ್ನವೀ ಬೇಗೆಯೊಳ
ಗಡಗುವೆಂ ಹಿಡಿಯಬೇಡುಮ್ಮಳಿಸಬೇಡೆಂದು
[ನೃಪ ಬೀಳಲನುವಾದನು] ॥ ೬

ಮುಳಿದು ನೊಗೆದೆಲ್ಲರಂ ಕೊಲ್ಲದಿಂದೆನ್ನನೊ
ಬ್ಬಳನೆ ಕೊಂದಪುದೆ ಭೂಭುಜ ನಿಮ್ಮ ಕೂಡೆ ಸರಿ
ಯೊಳು ಜೀವವಂ ಬಿಡುವುದುಚಿತವಲ್ಲಿಂ ಬಳಿಕ
ಬಿಡುವುದತ್ಯಧಮತನವು ।
ಎಳಸಿ ಮುತ್ತೈದೆತನವಲಿ ಮುಂದೆ ಹೋದಪೆಂ
ಕಳುಹಿಕೊಡಬೇಕೆಂದು ಮೆಯ್ಯಿಕ್ಕಿ ಬೇಡಿಕೊಂ
ಡಳು ಗಂಡನಂ ಚಂದ್ರಮತಿ ಪತಿವ್ರತೆಯರಾ
ನಂದನಿಧಿ ಲಲ್ಲೆಗಱೆದು ॥ ೭

ದೆಸೆಗಳಿಗೆ ನಮಿಸಿ ದೈವಕ್ಕೆಱಗಿ ರವಿಗೆ ವಂ
ದಿಸಿ ಕೋಟಿ ಭವಭವದೊಳೆನಗೀ ಹರಿಶ್ಚಂದ್ರ
ವಸುಧೇಶನೇ ಗಂಡನಾಗಲಿ ದಿಟಂ ಲೋಹಿ
ತಾಶ್ವನೇ ಮಗನಾಗಲಿ ।
ವಸುಸತ್ಯಕೀರ್ತಿಯೇ ಮಂತ್ರಿಯಾಗಲಿ ತರುಣ
ಶಶಿಮೌಳಿಯೇ ದೈವವಾಗಲೆಮ್ಮಳಿಯ ಪಾ
ಲಿಸುವ ವಿಶ್ವಾಮಿತ್ರ ನಿತ್ಯನಾಗಲಿಯೆನುತ
ಬೇಡಿಕೊಂಡಿಂತೆಂದಳು ॥ ೮

ಪೊಡವೀಶ ಕೇಳುಭಯಕುಲಶುದ್ಧಿಯಲ್ಲದಿ—
ರ್ದಡೆ ನಿನ್ನನಲ್ಲದನ್ಯರನು ಲೆಕ್ಕಿಸಿದೆನಾ
ದಡೆ ಹಿಂದೆ ನಿನಗೊಂದನಿಕ್ಕಿ ನಾನೊಂದನುಂ
ಡಡೆ ಮೂಱು ಕರಣವಱಿಯೆ ।
ನೃಡನಲ್ಲದನ್ಯದೈವಕ್ಕೆ ನಮಿಸಿದಡೆನ್ನ
ಹೊಡೆದು ಮುಕ್ಕುವುದು ದಾವಾಗ್ನಿ ಮೇಣಲ್ಲದಿ
ರ್ದಡೆ ಬಟ್ಟೆಗೊಟ್ಟಪುದು ಕೇಳೆಂದು ಬೊಬ್ಬೆಗೊಡು
ವಾ ಪೊತ್ತನೇವೊಗಳ್ವೆನು ॥ ೯

ತರುಣಿಯ ಮನಂ ಬೆದಱಬೇಕೆಂದು ನೆಗೆದು ದ
ಳ್ಳುರಿ ಗಗನಮಂ ತೀವಿ ಸುತ್ತಿ ಮುತ್ತಿರೆ ಕಂಡು
ಹರಿದು ಹೊಕ್ಕಳು ಹೊಕ್ಕಳಲೆಲೆ ಶಿವಶಿವ ಮಹಾ
ದೇವ ಬಗೆಯದೆ ಹೊಕ್ಕಡೆ ।
ತರುಣಸೂರ್ಯಂ ಕತ್ತಲೆಯನೆ ಹೊಕ್ಕಂತಾಯ್ತು
ನೆರೆದ ಕೌಶಿಕನ ಕೃತಕಾಗ್ನಿ ಹರಿದೋಡಿ ಭಾ
[1][ಪುರೆ][1] ಬಟ್ಟೆಗೊಟ್ಟುದೆಂಬಾಗಳುತ್ತಮರ ಮುಂ
ದಾಪ ಠಕ್ಕಿರಲಾಪುದು ॥ ೧೦

ಸುರರ ಹೂಮಳೆಯ ತಂಪಿಂ ನೆಲನ ಬಿಸಿಯಾಱೆ
ತ್ತುರಿಯ ನೆವದಿಂ ಸತಿಯ ಶುಚಿತನವನಱಿದು ಭೂ
ವರನಪ್ಪಿದಂ ಮಂತ್ರಿಯೆಱಗಿದಂ ಸುತನು ನಲಿ
ದಾಡಿದಂ ಸಂತಸದಲಿ ।
ಹರಕೃಪೆಯೊಳಗ್ನಿಭಯವೆಂತಕ್ಕೆ ದೊಮ್ಮಿಂಗೆ
ಪರಿಹರಿಸಿತುಗ್ರಮುನಿಗಿತ್ತವಧಿ ಸನಿಹವಾ
ಯ್ತಿರಬಾರದುರವಣಿಸಿ ನಡೆನಡೆಯೆನುತ್ತ ಪರಿ
ತಂದು ವಿಂಧ್ಯವ ಕಳಿದರು ॥ ೧೧

1 ಸುರ (ಸ.)

ಪಲವು ನಗರಂಗಳಂ ಹಲವರಣ್ಯಂಗಳಂ
ಪಲವು ಗಿರಿಗಳ ಕಳಿದು ನಡೆತರಲು ಮುಂದೆ ನುತ
ಕಲಿಮಲಕುಲಾಪಕರ್ಷಣೆಯಾನು ವಿಪುಳಪಾ
ತಕಕೋಟಿಕೋಟಿಯೆಂಬ ।
ಜಲಜವನಚಂದ್ರಕಳೆಯಾನು ಭವಭಯಕುಧರ
ಕುಲಿಶಾಭಿಧಾನೆಯಾನೆಂದು ಧರೆಗಱುಪಲೆಂ
ದೊಲಿವಂತೆ ಘುಳುಘುಳುಧ್ವಾನದಿಂದೆಸೆವ ಗಂ
ಗಾನದಿ ವಿರಾಜಿಸಿದಳು ॥ ೧೨

ಬಿಡೆ ಕೇಳ್ದಡಘಹರಂ ನೆನೆಯೆ ಪುಣ್ಯೌಘ ನುಡಿ
ದಡೆ ಸರ್ವಸಿದ್ಧಿ ಕಂಡಡೆ ಜನ್ಮನಾಶ ಪೊಗ
ೞ್ದಡೆ ಸುರೇಂದ್ರತ್ವ ಸೋಂಕಿದಡೆ ಕಮಲಜಪದವಿ
ಮುೞಿದೊಮ್ಮೆ ಕುಡಿತೆಗೊಂಡು ।
ಕುಡಿದನಾದಡೆ ಮುಕ್ತಿಯುವಗಾಹವಿರ್ದನಾ
ದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವ
ವಡೆವರೀ ಗಂಗೆಯಿಂದಾರಾದಡೆಂಬ ಮಹಿ
ಮೆಗೆ ಸಾಕ್ಷಿ ವೇದಮತವು ॥ ೧೩

ಭವಭಯಾಂಬುಧಿಯನುತ್ತರಿಸುವಂತುತ್ತರಿಸಿ
ಘುವಗಾಹವಿರ್ದುಂ ಕೃತಾರ್ಥತೆಯನೆಯ್ದುತಿ
ಪ್ಪವರನೀಕ್ಷಿಸಿ ಗಂಗೆ ಹೆಚ್ಚಿದಳು ನರಕಿಗಳು
ತನ್ನೊಳಗೆ ತೊಳೆದ ದೋಷ ।
ತವಿಲಾದುದೆಂದು ಪತಿಹಿತವೆಯಹ ಸುದತಿಯನ್ನ
ತವನಱಿಯದವನೀಶನುಭಯಕುಲಶುದ್ಧನಹ
ಕುವರನೀ ಸ್ವಾಮಿಹಿತವನಹ ಮಂತ್ರಿಯ ಸೋಂಕು
ತನಗೆ ಕೈಸಾರ್ದುದೆಂದು ॥ ೧೪

ನಡೆ [1][ಯೂಡೆ][1] ಮದು ವಿಷವೊಡಲಿಂಗೆ ಹಿತವೆಂಬ
ನುಡಿಯಂತೆ ಸುಖವಿಲ್ಲ ಪುಣ್ಯವುಂಟುಳಿದ ಹಲ
ವೆಡೆಯ ಸುಕ್ಷೇತ್ರಂಗಳೊಳಗವಱ ಪರಿಯಲ್ಲ
ಸುಖವುಂಟು ಪುಣ್ಯವುಂಟು ।
ಕುಡಿವ ಪಾದೋದಕಂ ಪನ್ನೀರ ಪಾನವಾ
ದಡೆ ಧರಿಸುವ ಪ್ರಸಾದಂ ಸುಧಾಪಿಂಡವಾ
ದಡೆ ಬಿಡುವರ್ಗಾರೆನಿಪ್ಪಂತೆ ಜನಧಿಹಪರಕೆ
ಸೊಗಸು ಕಾಶೀಕ್ಷೇತ್ರವು ॥ ೧೫

ಮುಗಿಲ ಬಸುಱಿಂ ಬಗಿದು ನೆಗೆದೊಗೆದು ವಿರಾಜಿ ಮೆಱೆ
ವಗಣಿತವೃಷಧ್ವಜಂಗಳ ಸೂರ್ಯಕೋಟಿಯಂ
ತೆಗೆದವೆಂಬಂತೆ ಮಾರ್ಪೊಳೆವ ಹೊಂಗಳಸಂಗ
ಳೆಸೆವ ಶಿವನಿಳಯಂಗಳ ।
ಸೊಗಸಿಗೆಡೆಯಾಡಿಯಾಡುತ ಪಾಡುತೆಯ್ತಪ್ಪ
ಪೊಗಳಿ ಪೊಡಮಡುವ ಬಲಗೊಂಬ ನೋಡುವ ನಲಿವ
ನಗುವ ನಾನಾಜನವನೊತ್ತರಿಸಿ ನಡೆತಂದು
ವಿಶ್ವಪತಿಯಂ ಕಂಡನು ॥ ೧೬

ನೋಡಿ ಪರಮಾನಂದ ಮೂಡಿ ಸುಖರಸದೊಳೋ
ಲಾಡಿ ಕೀರ್ತಿಸಿ ಹರಸಿ ಹಾಡಿ ಸದ್ಭಕ್ತಿಯಂ
ಬೇಡಿ ಮನದೊಳಗೆ ಮಾತಾಡಿ ನೆಱೆ ಬಿನ್ನಹಂ
ಮಾಡಿ ಪ್ರಸಾದಫಲವ ।
ಸೂಡಿ ಪರಿಣಾಮವಂ ಮಾಡಿ ದುಃಸ್ಥಿತಿಯ ನೀ
ಗಾಡಿ ಭವಜಲವನೀಸಾಡಿ ಬಲ್ಪಿಂ ಮನಂ
ಮೂಡಿ ಬೀಳ್ಕೊಂಡು ಸಂತಸದಿ ಮರಳಿದನುೞಿದ
ಲಿಂಗಂಗಳಂ ನೋಡುತ ॥ ೧೭

1 ನೋಡಿ (ಸ.)

ಗಡಿಗೆಟ್ಟ ಲಿಂಗಂಗಳೊಪ್ಪಕ್ಕೆ ಭೋಗಂಗ
ಸೂತಕಕ್ಕೆ ಮಂಗಳದ ಮಸಕಕ್ಕೆ ರಚನೆಗಳ
ಸಡಗರಕೆ ಬೆಱಗಾಗುತ್ತೆಲ್ಲಾ ನಿರೋಧಮಂ
ಮಱೆದು ನೋಡುತ್ತರಸನು ।
ನಡೆಯುತಿರಲಿದಿರೆದ್ದು ಮಾರಿಯಂದದಿ ಬಂದು
ಕೊಡು ಹೊನ್ನನಿನ್ನು ತಳುವಿದಡೆನ್ನ ಪತಿಯೆನಗೆ
ಕಡುಮುಳಿವನೆಂದು ಜಱೆಯುತ್ತ ನಕ್ಷತ್ರಕಂ
ತುಡುಕಿ ಸೆಱಗಂ ಹಿಡಿದನು ॥ ೧೮

ಕೊಟ್ಟವಧಿಯಂ ನೆನೆದು ನೋಡಿ ಹವ್ವನೆ ಹಾಱಿ
ಮುಟ್ಟಬಂದುದು ದಿನಂ ಕೈಕೊಂಡ ತೆಱದವಂ
ಕಟ್ಟುಗ್ರನಭ್ಯಾಸದವರಿಲ್ಲ ಚಾಚಲ್ಲಡ
ಪಿಲ್ಲ ನಾಂ ಕುಲಧರ್ಮವ ।
ಬಿಟ್ಟು ತಿರಿವವನಲ್ಲಪೋಲೈಸಿ ನೆಱೆ ಲಜ್ಜೆ
ಗೆಟ್ಟು ಬೇಡುವಡಲ್ಲಿ ದೊರೆಯಿಲ್ಲ ಕೃಷಿಯಿಂದ
ಹುಟ್ಟಿಸುವೆನೆಂಬಡೆಡೆಯಿಲ್ಲನಿನ್ನೇಗೆಯ್ವ
ನೆಂದು ಮಱುಗಿದನರಸನು ॥ ೧೯

ಏಗೆಯ್ವ ಚಿಂತಾಗ್ನಿಯುರಿಯ ಹೊಯ್ಲಿಂ ಕರಗಿ
ಹೋಗದಿರನೆಚ್ಚಱಿಸಬೇಕೆಂದು ಸತಿಯವಧಿ
ಮೇಗೆರಡು ಜಾವವಿದಱೊಳಗೆ ತಿದ್ದುವ ಬುದ್ಧಿ
ಯಂ ಕಾಣಬೇಕಲ್ಲದೆ ।
ಮೂಗುವಟ್ಟಿರ್ದಡೇನಹುದೆಂದಡೆರಡೆ ಬಳಿ
ಕೇಗೆಯ್ವ ಹೇಳೆನಲು ಸಾಲದಲಿ ಪೋದನಿತು
ಪೋಗಲೆನ್ನಿಬ್ಬರಂ ಮಾಱಿ ಬಳಿಕುಳಿದುದಂ
ಕಾಣು ನಡೆನಡೆ ಎಂದಳು ॥ ೨೦

ಕಡುನಿರೋಧಂಗೊಳಿಸಿ ದೇಶದಿಂ ಪರದೇಶ
ಕೊಡವರಿಸಿತಲ್ಲದಾನಿರ್ದು ನಿಮ್ಮಂ ಮಾಱು
ಗೊಡಲಾಪೆನೇ ಎಂದಡೆಲೆ ಮರುಳೆ ಸರ್ವಕ್ಕೆ
ಮೊದಲು ಸತಿಸುತರು ತನ್ನ ।
ಒಡಲು ಕಡೆ ಸತ್ಯಕ್ಕೆ ನೇಮಕ್ಕೆ ಬಂಧನ
ಕೆಡೆಯಲುಳುಪಲು ಶಿವ ಮನಂ ನೋಳ್ಪನ್ನೆ ಲಜ್ಜೆ
ಗೆಡದೆಮ್ಮ ಮಾಱು ಮತ್ತಾದುದಾಗಲಿ ಎಂದ
ಡವನಿಪನೊಡಂಬಟ್ಟನು ॥ ೨೧

ಪೊಡವಿಪಂ ಸತಿಸುತರ ತಲೆಗಳಲಿ ಹುಲುಗಟ್ಟಿ
ನಡೆನಡೆದು ಕೈವಿಡಿದು ಮುಂದೊಡ್ಡಿ ತೋಱುತ್ತಂ
ಗಡಿಗಳೊಳು ಬೀದಿಯೊಳು ಸಂದಿಯೊಳು ಪುರದೊಳೋ
ರಂತೆ ನಾಚಿಕೆಯನುಳಿದು ।
ಪೊಡವಿಪ ಹರಿಶ್ಚಂದ್ರಭೂವರನ ತನಯನಂ
ಮಡದಿಯಂ ಮಾಱುಗೊಂಬಧಿಕರಿಲ್ಲಾ ಎಂದು
ನಿಡುಸರದೊಳೊಱಲಿ ಜನಕಱುಪುತ್ತ ತೊಳಲಿದಂ
ಸತ್ಯನಿಧಿ ಭೂಪಾಲನು ॥ ೨೨

ಅನಿಮಿತ್ತ ಮುನಿವ ಮುನಿಪನ ಬೆಸದೊಳಗ್ನಿ ವಿ
ಪ್ರನ ವೇಷದಿಂದ ಬಂದಾವಾವ ಸತಿಪುತ್ರ
ರನಿಪರವರೆಂದಡವರಿಬ್ಬರೆನಲಿವನಬಲ
ನೀ ವನಿತೆ ಮುಪ್ಪಿನವಳು ।
ಮನೆಯೊಳಿನ್ನೊಳ್ಳಿ[1][ತ]ಹ[1]ಥಾರುಂಟು ತಾಯೆಂದ
ಡೆನಗುಳ್ಳರವರಯ್ಯ ಕೊಂಡೆನ್ನ ಸಾಕಿಕೊ
ಳ್ಳೆನೆ ಬೆಲೆಯ ಹೇಳೆನಗೆ ಲಾಗಾಗೆ ಹೊಂಗೊಡುವೆ
ನೇಳೆಂಟು ದಿನಕೆಂದನು ॥ ೨೩

1 ದಹ (ಪ.), ಹವ (ಕ.ಖ.ಗ.ಘ.)

ಇಂದು ಜ್ಯಗಿಂದೊಳಗೆ ರಾಸಿ ಹೊನ್ನಂ ಕೊಡುವೆ
ನೆಂದು ಭಾಷೆಯನಿತ್ತ್ತನೀಯದಿರ್ದಡೆ ಹಾನಿ
ಬಂದಪುದು ಲಾಗನಂಜಿಸದೆ ನಿನ್ನ ಮನಕೆ ಬಂ
ದನಿತರ್ಥಮಂ ಕರುಣಿಸು।
ತಂದೆಯೆನೆ ವನಿತೆಗಿಪ್ಪತ್ತು ಸಾಸಿರವನೀ
ನಂದನಂಗಿಪ್ಪತ್ತು ಸಾಸಿರವನೀವೆನೆನೆ
ಬಂದುದೆನಿಸುವುದೆಮ್ಮ ತೆಱಕಾಱಿಗೆಂದೆನಲು
ಬಂದುದೆನಿಸಿದನಾಗಳು ॥ ೨೪

ಬಂದುದೇ ನಕ್ಷತ್ರನಾಮಮುನಿ ಎನಲೇನು
ಬಂದುದಾಂ ಬಂದ ದಿನ ಮೊದಲಿಂದು ತನಕೆನ್ನ
ಹಿಂದುಳಿದ ಬತ್ತಾಯ ಬಂದುದೆನ್ನೊಡೆಯಂಗೆ
ಕೊಡುವ ಹೊಸ ರಾಸಿ ಹೊನ್ನ।
ತಂದೀಗ ಕೊಡು ಕೊಡದಡಿಲ್ಲೆನ್ನು ಹೋಗಬೇ
ಕೆಂದಡೀ ಹೊನ್ನ ಬತ್ತಾಯಕ್ಕೆ ತೆಱುವನ
ಲ್ಲೆಂದಡೀ ಮಧ್ಯಸ್ಥ ವಿಪ್ರ ಮೆಚ್ಚಲು ಕೊಂಬೆ
ನವನೀಶ ಕೇಳೆಂದನು ॥ ೨೫

ಈತನನಿತರ್ಥವಂ ಕೊಂಬುದುಚಿತವೆ ಹೇಳು
ತಾತ ಪಕ್ಷೀಕರಿಸದೆಂದೆನಲು ನಾಲ್ಕೆರಡು
ಮಾತಂಗದುದ್ದದರ್ಥದ ಸಾಲವಂ ಬೇಡ
ಬಂದವಂಗನಿತು ಘನವೇ।
ಭೂತಳಾಧಿಪ ಮುನಿದು ಪೇಳೆನಿರ್ದುದನೆಂಬೆ
ನೀತಿಗಿದು ಮರಿಯಾದೆಯೆನೆ ಜಲವನುಳಿದಬುಜ
ಕಾತರಣಿ ಮುನಿವನೆನೆ ನೆಲೆಗೆಟ್ಟು ಬಂದವರ್ಗೆ
ಮುನಿಯದವರಾರೆಂದನು ॥ ೨೬

ವಿನಯದಿಂ ಕಂಡುದಂ ನುಡಿದಡೆನ್ನಂ ನಿನಗೆ
ಮುನಿದನೆಂದೆಂಬೆ ನೀಂ ಮುನಿದು ಮಾಡುವುದೇನು
ಜನಪ ಎಮ್ಮೊಡವೆಯುಂ ಕೊಂಡೀಗ ಹೋಹೆವೆಂ
ದೇಳೆಲೆಗೆ ಸವುಡಿದೊತ್ತೆ ।
ಮನೆಯ ಕೆಲಸಕ್ಕೆ ನಡೆ ಹುಲು ಹುಳ್ಳಿ ತರಲು ಕಾ
ನನಕೆ ಹೋಗೇಳೆಲವೋ ಚಿಣ್ಣ ಎಂದಕಟ ಮಾ
ನಿನಿಯುಂ ಕುಮಾರನಂ ಜಱೆದನಾ ಕಪಟವಟು
ವೇಷಮಯದನಿಲಸಖನು ॥ ೨೭

ಹೋಹೆನೇ ತಂದೆ ಜೊಪ್ಪಯ್ಯ ಎಂದೆಂದು ಕಡು
ನೇಹದಿಂದಪ್ಪಿ ಕರುಣಂದೋಱೆ ಕಂಬನಿಯು
ಕಾಹೊನಲೊಳದ್ದುವ ಕುಮಾರನಂ ಕಾಲ್ಗೆ ಜಗಿ
ತಲೆವಾಗಿ ನಿಂದ ಸತಿಯು ।
ಬೇಹೊಡೆಯ ನಾನಿರಲು ಮಾಱೆದವನಂ ಕೇಳ್ವ
ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜ
ಗೇಹಕ್ಕೆ ಜಱೆಯುತ್ತ ಕೊಂಡೊಯ್ದನವನಿಪನ
ಮನ ಮಱುಗಬೇಹುದೆಂದು ॥ ೨೮

ಖಗವಂಶದಿಕ್ಷ್ವಾಕು ಭೂವರನ ಪೀಳಿಗೆಯೊ
ಳೊಗೆದ ತ್ರಿಶಂಕುವಸುಧಾಧಿನಾಯಕನ ಹೆ
ಮ್ಮಗ ಹರಿಶ್ಚಂದ್ರನಂ ಮಾಱುಗೊಂಡ್ಪೋಲೈಸಿ
ಕೊಂಬರ್ಗೆಲ್ಲಾ ಎನುತ್ತ ।
ಬಗೆಬಗೆದು ಪುರದ ಕೇರಿಯ ಮನೆಯೊಳಡ್ಡ ಬೀ
ದಿಗಳ ಬೀದಿಯ ನಿಂದ ನೆರವಿಗಳ ಜನಮುಮಂ
ಮಿಗೆ ಕೇಳಿಸುತ್ತ ತೊಳಲಿದನು ಮಧ್ಯಾಹ್ನ
ಮೊದಲಾಗಿ ಕಡೆಹಗಲತನಕ ॥ ೨೯

ಮಡದಿಯರನಿರಿಸಿಕೋ ಎಂದು ನಾಂ ಬೇಡಿಕೊಂ
ಡಡೆ ಮಾಜಿ ಹೊಲತಿಯರನೊಲ್ಲೆನೆಂಬಣ್ಣನಂ
ಕಡೆಗನಾಮಿಕನ ಕಿಂಕರನಾಗಿ ಸುಡುಗಾಡ
ಕಾವಂತೆ ಮಾಳ್ಪೆನೆಂದು।
ಕಡುಮೂರ್ಖ ಕೌಶಿಕಂ ಕಾಲನಂ ಕರೆದು ನೀಂ
ಬಿಡದನಾಮಿಕನಾಗಿ ಧನವನಿತ್ತರಸನಂ
ತಡೆಯೆಂದು ಮುನ್ನೊಂದು ತಿಂಗಳಿನೆ ಕಳುಹೆ ಬಂ
ದಾ ಹೊತ್ತ ಹಾರಿರ್ದನು ॥೩೦

ಪಿಡಿದ ಸಂಬಳಿಗೋಲು ಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುಱು ಮಡಮಡಿಸಿ ತರಹರಿಸು
ವಡಿಯು ಕೆದಱಿದ ತಲೆಯು ನಡಸಿ ಸುತ್ತಿದ ಮುಪ್ಪು
ರಿಯ ಬಾರಿ ಕಡ್ತಣಿಗೆಯು।
ಬಿಡದೆ ಘರ್ಜನೆ ತೇಗಿ ನೆರವಿಯಂ ಬಯ್ವ ಬಿಱು
ನುಡಿಯು ಕಲಿ ವೀರಬಾಹುಕ ಬರುತ್ತಂ ಮಾಱು
ವಡೆ ಕೊಂಡು ಹೊಂಗೊಡುವೆ ನಾನೆಂದು ತನ್ನ ಹಡ
ಪಿಗನಿಂದ ಕೇಳಿಸಿದನು ॥೩೧

ಕೊಡುವಾತನಾರು ಬೆಲೆಯೇನು ಮಾಱಿಸಿಕೊಂಬ
ಪ್ರೊಡವೀಶನೆಂಬನಾರೋ ವೀರಬಾಹು ಕೇ
ಳ್ದಡೆ ಕೊಂಬನೀಗಳೆಂದೆನೆ ನೃಪಂ ಬೆಱಗಾಗಿ
ಸೂರ್ಯವಂಶದಲಿ ಹುಟ್ಟಿ।
ಮೃಡಮೂರ್ತಿ ವಾಸಿಷ್ಠಮುನಿಯ ಕಾರುಣ್ಯಮಂ
ಪಡೆದೆನ್ನನೀ ಹೊಲೆಯ ಮಾಱುಗೊಂಡಪನೆಂದು
ನುಡಿವ ಬಲುಹಂ ನೋಡು ನೋಡೆಂದು ಕಡುಮುಳಿದು
ಕೋಪಿಸಿದನವನೀಶನು ॥೩೨

ನಡುಗದಂಜದೆ ಹೆದಱದೋಸರಿಸದಕಟಕಟ
ಕಡೆಯ ಹೊಲೆಯಂ ಮೋರೆದಪ್ಪಿ ಬಂದೆನ್ನ ತ
ನ್ನೊಡೆಯಂಗೆ ದಾಸನಾಗೀಗಳೆಂದೆಂಬುದಿದು
ಕಾಲಗುಣವೋ ಎನ್ನನು
ಎಡೆಗೊಂಡ ಕರ್ಮಫಲವೋ ಕಡೆಗೆ ಮೊಣಸು ಹುಳಿ
ತಡೆ ಜೋಳದಿಂ ಕುಂದೆ ನೋಡು ನೋಡೆಂದು ಘುಡು
ಘುಡಿಸಿ ಕೋಪಾಟೋಪದಿಂ ಜಱೆದು ಝುಂಕಿಸಿದ
[illegible]ನ್ನವನಿಪನನಾಮಿಕನನು ೩೩

ಕೇಳಿ ಬಂಧಾರ ಜಱೆದಷ್ಟೆಯೆನಲು ನಿನ್ನ ಹಡ
ಪಾಳಿಯನದೇಕೆನ್ನನೞಿದಱಿದನಾಮಿಕಂ
ಗಾಳಾದಪಾಯೆಂದು ನುಡಿವನಿಂತೆನಬಹುದೆ
ಕೀಳುಮೇಲಂ ನೋಡದೆ
ಕೀಳಾರು ಮೇಲಾರು ಹದುಳವಿಪ್ಪನು ಚಾಂ
ಡಾಳನೋ ಹುಸಿಯ ಹೊಲೆಯಂ ಹೊಱುವ ನೀನು ಚಾಂ
ಡಾಳನೋ ಹೇಳೆಂದಡಾನೀಗ ಹುಸಿದುದೇ
ನೆರೆದನು ಹರಿಶ್ಚಂದ್ರನು ॥ ೩೪

ಹೊನ್ನುಳ್ಳ ಧನಿಕರಾರಾದೊಡಂ ಕೊಂಬವರ್
ಬನ್ನಿಯೆನ್ನಂ ಮಾಱುಗುಡುವೆನೆಂದೆನೆ ದಿಟಂ
ಸನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತ
ಮದ್ವಿಜರು ಕೊಂಬುದೆಂದು
ಮುನ್ನ ನೀನಾಡಿತುಂಟೇ ಹೇಳು ಭೂಪಾಲ
ನಿನ್ನ ನುಡಿ ನಿನಗೆ ಹಗೆಯಾಯ್ತು ಕಂಡುದನಲ್ಲ
ದೆನ್ನನೀ ಹೊಲೆಹುಸಿಯ ಹೊಱುವವಂ ಹೊಲೆಯನ
ಲ್ಲದೆ ಬಳಿಕ್ಕಾರೆಂದನು ॥ ೩೫

ವಿತ್ತವುಳ್ಳವರ್ಗಳೆನ್ನಂ ಕೊಂಬುದೆಂದು ನುಡಿ
ಯಿತ್ತು ದಿಟವಿನ್ನು ನಾನೊಗಡಿಸಿದೆನಾದಡನಿ
ಮಿತ್ತ ಹುಸಿ ಬಂದಪುದು ಅವಧಿಗೆಟ್ಟಡೆ ಹಿಂದೆ
ಮುನಿಗೆ ನಾಂ ದಾನವಾಗಿ।
ಇತ್ತ ರಾಜ್ಯಂ ನಿರರ್ಥಂಬೋಗಿ ಮೇಲೆ ಹುಸಿ
ಹೊತ್ತಪ್ಪುದದಱಿಂದ ಮುನ್ನವೆ ಅನಾಮಿಕನ
ಚಿತ್ತವಂ ಪಡೆವೆನೆಂದೋತು ಕರೆದಂ ವೀರ
ಬಾಹುಕನನವನೀಶನು ॥ ೩೬

ಮತ್ತೇಕೆ ಹುಸಿಯ ಹೊಲೆಹೊಱೆ[3]ಕಾಱ ಕರೆದೆಯೆನೆ
ತೆತ್ತ ಸಾಲದ ಭರದೊಳಱಿಯದಾಡಿದ ನುಡಿಗೆ
ಹೊತ್ತ ಹುಸಿಯುಳಿಯಬೇಕೆಂದೆನಲು ನಿನ್ನ ಕುಲ
ವಳಿದಲ್ಲದಳಿಯದೆನಲು।
ಚಿತ್ತೈಸಿ ಕೇಳಿನ್ನು [1]ನಾ[1]ಡ ಮದ್ದಂ ತಿಂದು
ಕುತ್ತ ಕೆಡದಿರ[2]ಬಹುದೆ[2] ಸಾಲವಳಿಯಲು ಧನವ
ನಿತ್ತು ರಕ್ಷಿಸು ಸಾಕು ರವಿಕುಲಕೆ ಕುಂದಿಂದು
ಬಂದಡಂ ಬರಲೆಂದನು ॥ ೩೭

ನೂಱಾಱು ಸಾವಿರವೆ ಸಾಲವೇನೆನೆ ಕರಿಯ
ನೇಱ ಮೇಲಕ್ಕೆ ಮಿಡಿದಡೆ ಕವಡೆ ಬಿಡೆ ಹಬ್ಬಿ
ಹಾಱಿದನಿತುದ್ದಕ್ಕೆ ಸುರಿದು ಹೊಸ ಹೊನ್ನ ರಾ
ಶಿಯನೀಯಬೇಹುದೆನಲು।
'ಏ"ಱಿದರ್ಥವನೀವೆ ನೀ ಮಾಳ್ಪುದೇನಾಡಿ
ತೋಱಿ[3]ಂದಡಾವ ಹೊತ್ತಾವ ಕೆಲಸವನೀಯ
ಲ್ಲಾಱಿ[3]ನ್ನೆನ್ನದೆ ಮಾಳ್ಪೆನೆಂದಡೊಡವೆಯನೀವೆ
ನೆಂದನಂತಾ ಧನಿಕನು ॥ ೩೮

---

1 ಶಾ (ಕ.); 2 ಲಹ ದೆ (ಕ.), ಲಾಗ (ಘ.ಪ.); 3 ಹೇ (ಪ.)

ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ
ನಡವೆನೆಂದೊಬ್ಬರೊಬ್ಬರಿಗೆ ನಂಬುಗೆಯಿತ್ತು
ಒಡೆಯನಾದಂ ವೀರಬಾಹುವಾಳಾದನಿನ
ಕುಲತಿಲಕ ಹರಿಶ್ಚಂದ್ರನೃಪನು।
ಹೆಡಗೆಹೆಡಗೆಗಳೊಳಡಿಗಡಿಗಡಕಿ ಹಸ್ತಿಯಂ
ಪಿಡಿದು ಕವಡೆಯ ಮಿಡಿದು ನಡೆ ನೋಡಿ ನೋಡಿ ತಂ
ದೆಡೆವಿಡದೆ ಸುರಿದನರ್ಥವನು ಕೌಶಿಕಮುನಿಯ
ತೆಱಕಾಱ ತಲೆದೂಗಲು ॥ ೩೯

ಇತ್ತವಧಿಗೆನ್ನೆರಡು ಗಳಿಗೆ ಹೊತ್ತಿದೆ ಮುನಿಪ
ಚಿತ್ತೈಸು ವಸ್ತುವಿದೆ ಸಂದುದೇ ನುಡಿದು ಹುಸಿ
ಯಿತ್ತಿಲ್ಲಲೇ ತಂದೆ ಆಯಸಂಬಡಿಸಿದೆನು
ತಡೆದೆನಳಲಿಸಿದೆ ನಾನು।
ಅತ್ಯಂತ ಮೂಢನೆನ್ನವಗುಣವನುಳಿದು ತ
ನ್ನುತ್ತಮಿಕೆಯಂ ಮೆಱೆದು ಕರುಣಿಸುವುದೆಂದೆಮ್ಮ
ಹೆತ್ತಯ್ಯ ಕೌಶಿಕಂಗೋವಿ ಬಿನ್ನೈಸೆಂದು
ಭೂಭುಜಂ ಕೈಮುಗಿದನು ॥ ೪೦

ಇನ್ನೇಕೆ ನುಡಿದೆನ್ನ ನಾಚಿಸುವೆ ಭೂಪಾಲ
ನಿನ್ನಂತೆ ಸತ್ಯರುತ್ತಮರಧಿಕಧೀವಶಿಗ
ಳುನ್ನತಶಿವೈಕ್ಯರಿಳೆಯೊಳಗಿಲ್ಲ ನಿನ್ನಿಷ್ಟ
ಸಿದ್ಧಿ ಕೈಸಾರಲೆಂದು।
ತನ್ನ ಮನವುಕ್ಕಿ ಹಾರೈಸಿ ಹರುಷದಿ ಹರಸಿ
ಹೊನ್ನನಡಕಲು ಹೋದನತ್ತಲಿತ್ತಲು ನಡೆಮು
ನ್ನಿಕಾಱಂ ಪತಿಯ ಹಿಂದೆ ಹೊಲಗೇರಿಗೆ
ಯ್ತಂದನೆಮರರು ಮಱುಗಲು ॥ ೪೧

ಹಲವೆಲುವಿನ ಸಿಕ್ಕುಗಳ ಬಿಗಿದು ಬೀವಂ ನೆಯ್ದು
ನುಲಿಯ ಹಂದೊಗಲ ಹಾಸಿನೊಳು ಮಂಚದ ಮೇಲೆ
ಹೊಲೆಯನೋಲಗವಿತ್ತು ನರಕಪಾಲದೊಳು ತೀ
ವಿದ ಹಸಿಯ ಗೋಮಾಂಸವ।
ಮೆಲುತ ಮದ್ಯವನೀಂಟುತಿರ್ಪ ಪತಿಯಂ ಕಂಡು
ನೆಲವಲ್ಲಿ ಕುಳ್ಳಿರ್ದ ರವಿಕುಲನ ಹೆಗಲಮೇ
ಲೆಲೆಲೆ ನೀಡಿದನು ಕಾಲಂ ಕಾಲನೊಂದೆರಡು
ಕುಲಗಿರಿಯ ಭಾರವೆನಲು ॥ ೪೨

ಏಳಬುಧಿ ಕಡೆಯಾದ ಸರ್ವರಾಜ್ಯಶ್ರೀಯ
ಮೇಳದೊಳು ವೀರಸಿರಿಯಂ ವಿಜಯಸಿರಿಗಳಂ
ತಾಳಲಾಪ್ಪದಟುಳ್ಳ ಭುಜವನಾಮಿಕನ ಪದ
ಭಾರಕ್ಕೆ ಬಸವಳಿವುದೇ।
ಕಾಳೆಗದೊಳರಿನೃಪರ ಖಂಡಮಂ ರುಧಿರಮಂ
ಕಾಳಿಜವನಡಗನೊಳ್ಗರುಳ ಹಿಣಿಲಂ ಹೊಱುವ
ಬಾಳ ಪಡೆದಿಪ್ಪನ್ನೀ ಹೇಯಕ್ಕೆ ಹೇಸುವನೆ
ಎನಿಸಿ ಲೆಕ್ಕಿಸದಿರ್ದನು ॥ ೪೩

ಎಲವೊ ನೀ ದಿಟ ರಾಯನಾದಡಳುಕದೆ ಬಂದು
ನೆಲದಲ್ಲಿ ಕುಳ್ಳಿರ್ಪೆ ಸತ್ಕುಲಜನಾದಡಂ
ಹೊಲೆಯನಾಳ್ನಿನ್ನ ಕಾಲಂ ಹೊಱುವೆ ಮುನಿಮತೋ
ಚಿತ ಶಿವಾರ್ಚಕನಾದಡೆ।
ಹೊಲಸಿನಿಟ್ಟೆಳಿಗೆ ಕೊಕ್ಕರಿಸದಿಹೆ ರಾಜ್ಯಸಿರಿ
ತೊಲಗಿದಡೆ ಪೂರ್ವಗುಣವಳಿವುದೇ ಮುನ್ನ ಭವಿ
ನಿಳಯದೊಳು ತಲೆಮುಟ್ಟಿ ದುಡಿದ ಗಾವದಿಯೈಸೆ
ಭೂಪಾಲನಲ್ಲೆಂದನು ॥ ೪೪

ಹಸುವನಳಿ ಹಾರುವನನಿಱಿ ಮಾತೆಪಿತರ ಬಾ
ಧಿಸು ಸುತನ ತಿವಿ ಸತಿಯ ಕೊಲು ಮಾರಿಗೊಱಿಗಟ್ಟು
ವಿಷವ ಕುಡಿ ಹಾವ ಹಿಡಿ ಹುಲಿಗೆ ಮಲೆ ದಳ್ಳುರಿಯೊ
ಳಡಗು ಹೋಗೆಂದೊಡೆಯನು।
ಬೆಸಸಿದಡೆ ನಾನಾಱಿನೆನಬಾರದೆಂಬಾಗ
ಳಸವಸದೊಳಿವಕಲಸಿ ಸೆಡೆದೆನಾದಡೆ ಕೊಟ್ಟ
ಬೆಸನ ನಡಸುವೆನೆಂಬ ನುಡಿ ಸಡಿಲವಾಗದೇ,
ಹೇಳೆಂದನವನೀಶನು ॥ ೪೫

ಏನನಾಂ ಬೆಸನಿತ್ತೊಡದ ಬಿಡದೆ ನಡಸುವಾ
ನೀನೆನಲು ನಡಸದಿರ್ದಡೆ ನೀನು ಕೊಟ್ಟೊಡವೆ
ದಾನವೇ ಬಗೆಯೆ ಕರಿ ಹೂಳುವನಿತರ್ಥಮಂ
ಕೊಂಡು ಮಾಡದೆ ಮಾಣ್ದಡೆ।
ಈ ನೆಲಂ ಹೊಱುವುದೇ ನಾನಿತ್ತ ನಂಬುಗೆಗೆ
ಹಾನಿಯಾಗದೆ ಹೋಹುದೇಯೆನಲು ಸುಡುಗಾಡ
ನಾನಂದದಿಂ ಕಾದುಕೊಂಡಿರುತಿರೆಂದು
ಬೆಸಸಿದನು ಮನದನುವಱಿಯಲು ॥ ೪೬

ಸುಡುಗಾಡ ಕಾಹವೆಂದೇನದಱ ಪಂಥಮಂ
ನುಡಿದು ಪೇಳೆನೆ ಸುಡುವ ನೆಲದೆಱೆಯ ಹಾಗ ಹೆಣ
ದುಡಿಗೆಯಂ ತಂದೆನಗೆ ಕೊಡುವುದಾತಲೆಯಕ್ಕಿ
ಯುಂ ನಿನ್ನ ಸಂಬಳಕ್ಕೆ।
ಪಡಿಯಾಗಿ ಕೊಂಡುಂಬುದಳುಪದಿರು ಹುಸಿಯದಿರು
ಬಿಡದಿರೆಂದುಡುಗೊಱೆಯ ವೀಳೆಯದ ಕೂಡೆ ತಾ
ಹಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ವನಧಿ
ಮುದ್ರಿತಧರಾಧಿಪತಿಗೆ ॥ ೪೭

ಹೆಸರ ಹೇಳುತ್ತ ಸಾಱುತ್ತ ಮೈಗುಱುಹ ತೋ
ಱಿಸುತ ಪುರದೊಳಗೆಯ್ದೆ ಜನವಱಿಯೆ ಹಱೆಯ ಮೊಳ
ಗಿಸುತ ಮೆಱೆಯುತ್ತ ಹೋಗೇಳೆಂದು ಕಳುಪೆ ಪೊಱ
ಮಟ್ಟನೆಲ್ಲವ ಮಾಡುತ ।
ನಸುಕುಸಿದ ದೇಹ ಕಂಕರಿಗೋಲ್ಲನಿಱಿದು ಬಾ
ರಿಸುತ ಕೈವಿಡದೆ ಸಂಬಳಿಸಂಬಳೆಂದೆಂದು
ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿ
ದಂ ಸತ್ಯಸಂಪನ್ನನು ॥ ೪೮

ಸುಡುಗಾಡಿನಧಿಕಾರಮುದ್ರೆ ಕಟ್ಟಾಣೆ ಚಾ
ವಡಿ ಹೆಣನ ತಲಯಕ್ಕಿ ನೆಲದೆಱೆಯ ಹಾಗ ಶವ
ದುಡಿಗೆಯೆನಗಾಯ್ತೆನ್ನ ಮಱಿಕ್ಕಿ ರಾತ್ರಿಯೊಳು
ಸುಟ್ಟರಾದಡೆ ತೆಱೆಯನು ।
ಕೊಡದಿರ್ದಡೆನ್ನಾಣೆ ಪತಿವೀರಬಾಹುವಿನ
ಮಡದಿಯರ ಕಾಲಾಣೆ ಮೀಱಿದಡೆ ಕೆಡಹಿ ತಡೆ
ಗಡಿವೆನೆಂದೂರೊಳಗೆ ಸಾಱುತ್ತ ತೋಱುತ್ತ
ರುದ್ರಭೂಮಿಗೆ ನಡೆದನು ॥ ೪೯

ಕಂಗೆ ಭಯವೆನೆ ಬೇವ ಹೆಣನ ಹಿಂಡುಗಳ ಮೂ
ಗಿಂಗೆ ಹಗೆಯೆನೆ ಕವಿವ ಕರ್ಬೊಗೆಯ ಕೌಱ ಕ
ರ್ಣಂಗಳಿಗಮಂಗಲಧ್ವನಿಗಳಂ ನೆರಪುವಬ
ಲೆಯರ ಮಲ್ಲಾಮಲ್ಲಿಯ ।
ಹಿಂಗದೊತ್ತೊತ್ತೆಯಿಂ ಮೆಯ್ಯನೊತ್ತುವ ಜನದ
ಜಂಗುಳಿಯ ಕಾಲೂಱಲರಿದೆನಿಸಿ ನೆರೆದ ಹಲ
ವಂಗಪಕ್ಷಿಗಳನಾರಯ್ಯುತ್ತ ಹೊಕ್ಕನಾ
ಸುಡುಗಾಡನವನೀಶನು ॥ ೫೦

ನಡೆದು ಹರಿಹರಿದು ಸುಡದಿರು ಸುಡದಿರ್ದಿಲವೊ ಸು
ಟ್ಟಡೆ ನಿಮಗೆ ವೀರಬಾಹುಕನಾಣೆಯೆಂದು ಜಡಿ
ಜಡಿದು ನೆಲದೆಱೆಯ ಹಾಗವನಿಕ್ಕುಟ್ಟ ಕಪ್ಪಡಂ
ಗಳನು ತಲೆಯಕ್ಕಿಗಳನು।
ಸುಡುಗಾಡೊಳಲ್ಲಲ್ಲಿಗೆಯ್ದಿ ಬೇಡುವ ಭರದೊ
ಳಿಡಹುತ್ತ ತಾಗುತ್ತಲೆಲುಗಳಂ ಮೆಟ್ಟಿ ತ
ನ್ನಡಿಗಳಳುಕಿತ್ತನೆಱಿಯದೆ ಹಾಸುಹೊಕ್ಕು ಹರಿ
ದಾಡಿದಂ ಭೂಪಾಲನು ॥ ೫೧

ಮತ್ತಾಗ ಸುಡುಗಾಡ ನಟ್ಟನಡುವಣ [1]ದಡದ[1]
ತುತ್ತತುದಿಯೊಳು ವಿವಾನದ ಮರಂಗಳನು ಕಡಿ
ಹೊತ್ತಿ ಉರಿಕರಿಯಾದ ಕರಿಕೊಳ್ಳಿಗಳನೆಳಸಿ
ತಂದು ಸಿದ್ದಿಗೆಯ ನುಲಿಯ।
ಒತ್ತಿ ಬಿಗಿಬಿಗಿದು ಹಂಜರಿಸಿ ತವಗವನಿಕ್ಕಿ
ಮತ್ತೆ ಮೇಲೊಂದು ತಲೆಗುಡಿಸಲಂ ಕಟ್ಟಿ ಕಾ
ಯುತಿರ್ದನಿರುಳುಹಗಲೆನ್ನದೊಡೆಯಂ ಬೆಸಸಿ
ದಂತೆ ವಸುಧಾಧೀಶನು ॥ ೫೨

ವರ ವಾರಣಾಸಿಮಧ್ಯವೆ ಲಾಳದೇಶವೆ
ಚ್ಚರಿಯ ಕಾಶೀಪುರವಯೋಧ್ಯೆ ಶ್ಮಶಾನಧರೆ
ಯರಮನೆ ಪ್ರೇತಗೇಹಿನ ತವಗ ಮಣಿಪೀಠ
ಪರಿಣಾಮ ವಾರೋಗಣೆ।
ಪರಮಧೃತಿ ಚತುರಂಗಸೇನೆ ಸಂಬಳಿಗೋಲು
ಕರವಾಳು ಸತ್ಯ ಭಂಡಾರ ಪತಿಯಾಜ್ಞೆ ಭಾ
ಸುರತರಕ್ಷತ್ರಧರ್ಮಂಗಳೆಂದೇ ಕಾಣು
ತಿರ್ದನು ಹರಿಶ್ಚಂದ್ರನು ॥ ೫೩

[1] ತೆವರ (ಪ.)

## ೮. ರೋಹಿತಾಶ್ವನ ಮರಣ, ಚಂದ್ರಮತಿಯ ದುಃಖ

ಇಂತು ನೃಪನಿತ್ತ ದಿವಸಂ ಕಳೆಯುತಿರಲಿತ್ತ
ಲಂತವರನೊತ್ತಿಟ್ಟ ಮನೆಯನೇವೊಗಳ್ವೆನದು
ತಿಂತಿಣಿಯ ಸೊನೆಗಾಜಿರ ನಿಳಯ ರಕ್ಕಸಿಯ
ಮಾಡ ಹಾವಿನ ಹೇಳಿಗೆ ।
ಅಂತಕನ ನಗರ ಮೃತ್ಯುವಿನ ಬಲುಬಾಣಸದ
ಹಂತಿ ಮಾರಿಯ ಮುಗ್ಗುರಿಯಾಟವೆಡೆಯೆಂಬಾಗ
ಳಿಂತು ಜೀವಿಪರೆಕಟ ಮನೆಯವರ ದುರ್ಧರದೊ
ಳವನಿಪನ ಸತಿಪುತ್ರರು ॥ ೧

ಒಡೆಯನತಿಕೋಪಿ ಹೆಂಡತಿ ಮಹಾಮೂರ್ಖೆ ಮಗ
ಕಡುಧೂರ್ತ ಸೊಸೆಯಾವಡಧಿಕನಿಷ್ಠುರೆ ಮನೆಯ
ನಡೆವವರು ದುರ್ಜನರು ನೆರೆಮನೆಯವರು ಮಿಥ್ಯಾ-
ವಾದಿಗಳು ಪಶುಗಳೆಗಡು ।
ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಲ್ಗೆಡೆವ ಕರೆಕರಿಸಿ ಸೆಣಸುವ ತಪ್ಪ ಸಾಧಿಸುವ
ಕಿಡಿಪೊಡೆವ ಮಾರಿಗಾಜಿದೆ ಸತ್ತು ಹುಟ್ಟುತಿಹ
ರವನಿಪನ ಸತಿಪುತ್ರರು ॥ ೨

ಎಡೆವಿಡದೆ ಹಲವು ಸೂಳ್ಗೊಡೆಯನರಮನೆಗೆ ನೀ
ರಡಕಿ ಕೊಟ್ಟನಿತು ಬತ್ತವ ಮಿದಿದು ಒಡಲಿಗೆ
ಯ್ದಡೆಯಿಕ್ಕಿದನಿತುವ ನುಂಡು ಇರುಳಂ ಹಗಲು
ಪೈನ್ನದೋರಂತೆ ಕುದಿವ ।
ಮಡದಿಯ ಕುಮಾರನುದಯದೊಳೆದ್ದು ಹೋಗಿ ಹೇ
ರಡವಿಯಲಿ ಹುಲುಹುಳ್ಳಿಯಂ ಕೊಂಡು ನಿಚ್ಚ ತ
ನ್ನೊಡನಾಡಿಗಳ್ವೆರಸಿ ಬೈಗೆ ಬಂದಿಂತು ಕಾ
ಲವನು ಸವೆಯಿಸುತಿರ್ದನು ॥ ೩

ಓರಂತೆ ತಲ್ಲಣಿಸಿ ಹೆದಱೆ ಕಣ್ಗೆಟ್ಟೋಡ
ಬಾರದೆರಬಾರದುಱೆ ಸಾಯಬಾರದು ಬದುಕ
ಬಾರದೆಂಬಂತೆ ತನ್ನೊಡಲಿಂಗೆ ಬಪ್ಪ ದುಃ
ಖಂಗಳಿಗೆ ಸಾಕ್ಷಿಯಾಗಿ ।
ಧಾರಿಣಿಯೊಳವನಿಪನ ಸತ್ಯ ಸಲಬೇಹುದೆಂ
ಬಾರಯ್ಕೆವಿಡಿದು ನಡೆಯುತ್ತಿಪ್ಪ ನಾರಿಯ ಕು
ಮಾರಂಗೆ ಬಂದ ಸಂಕಟದ ಸಂವರಣೆಯನ
ದಾವ ಜೀವರು ಕೇಳ್ವರು ॥ ೪

ಎಂದಿನಂತುದಯಕಾಲದೊಳೆದ್ದು ಹುಲುಹುಳ್ಳಿ
ಗೆಂದರಣ್ಯಕ್ಕೆ ನಡೆದಲ್ಲಲ್ಲಿ ಹೋಗಿ ಹಲ
ವಂದದೆಡುಗಬ್ಬನಾಯ್ದೊಟ್ಟಿ ಹೊಱೆಗಟ್ಟಿಹೊ
ತ್ತೇರಗೆಯ ಮಕ್ಕಳೊಡನೆ ।
ನಿಂದು ಮಧ್ಯಾಹ್ನದುರಿಬಿಸಿಲೊಳೆದೆ ಬಿರಿಯೆ ಜವ-
ಗುಂದಿ ತಲೆಕುಸಿದು ನಡೆಗೆಟ್ಟು ಬಾಯಾಱೆ ಹಣೆ
ಯಿಂದ ಬೆಮರುಗೆ ನೆತ್ತಿ ಹೊತ್ತಿ ತೇಂಕುತ್ತ ಹರಿ
ತಪ್ಪಾಗಳೇವೊಗಳ್ವೆನು ॥ ೫

ಕೆಲದ ಮೆಳೆಯೊತ್ತಿನೊಳಗಿರ್ದ ಹುತ್ತಿನೊಳು ನಳ
ನಳಿಸಿ ಕೋಮಲತೆಯಿಂ ಕೊಬ್ಬಿ ಕೊನೆವಾಯ್ದು ಕಂ
ಗೆಳವಟ್ಟು ಬೆಳೆದೆಳೆಯ ದರ್ಭೆಯಂ ಕಂಡು ಹಾ
ರಯಿಸಿ ನಾನಿದನೆಲ್ಲವ ।
ಗಳಗಳನೆ ಕೊಯ್ದು ಕೊಂಡೊಯ್ದಿತ್ತಡೆನ್ನೊಡೆಯ
ಮುಳಿಯದಿಹನೆಂಬಾಸೆಯಿಂ ಹೊಱೆಯನಿಳುಹಿ ಮ
ತ್ತೆಳಸಿ ಕುಡುಗೋಲ್ವಿಡಿದು ಸಾರ್ದನಸ್ತಾದ್ರಿಯಂ
ಸಾರ್ದ ಮಾರ್ತಾಂಡನಂತೆ ॥ ೬

ಹೊದೆಗಡಿದು ಹತ್ತಿ ಹುತ್ತನು ಸುತ್ತಿದೆಳಹುಲ್ಲ
ಹೊದಱ ಹಿಡಿದಡಸಿ ಬಿಡದರಿದು ಸೆಳೆಯಲ್ ಕೈಯ
ಹದರನೊಡೆಗಚ್ಚಿ ಜಡಿಯುತ್ತ ಭೋಂಕನೆ ಬಂದ
ರೌದ್ರಸರ್ಪನನು ಕಂಡು ।
ಹೆದಱಿ ಹವ್ವನೆ ಹಾಱಿ ಹಾ ಎಂದು ಕೈಕಾಲ
ಕೆದಱಿ ತಲೆಕೆಳಗಾಗಿ ಕೆಡೆದನಕಟಕ್ಕಟ ಮದ
ಮುದಿತರಾಹುಗ್ರಸ್ತವಾದ ತರುಣೇಂದುಬಿಂ
ಬಂ ನೆಲಕೆ ಬೀಳ್ವಂದದೆ ॥ ೭

ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡೊಡನಿರ್ದ
ತತ್ತುಕಂಗಳು[1] ಹೆದಱಿ ಬಿಟ್ಟೋಡಿ ಹೋದರ್ಹೊ
ರತ್ತಲಿತ್ತಂ ತಾಯ್ಗೆ ಹಲುಬಿ ತಂದೆಯ ಕರೆದು
ದೆಸೆದೆಸೆಗೆ ಬಾಯ ಬಿಟ್ಟು ।
ನೆತ್ತಿಗೇಱಿದ ವಿಷದ ಕೈಯಿಂದ ಮಡಿದನೇ
ಹೊತ್ತೆನ್ನ ಕುಲದ ಕುಡಿ ಮುರುಟಿತೆಂದುಮ್ಮಳಂ
ಬೆತ್ತು ಬೀಳದೆ ಮಾಣನೆಂಬಂತೆ ರವಿ ಬಿದ್ದ
ನೆಂದು ಪಡುವಣ ಕಡಲೊಳು ॥ ೮

---

1 ಜತ್ತಕಂಗಳು (ಕ.), ತತ್ತಕರು (ಖ.ಗ.)

ತನಯನೆಂದುಂ ಬಪ್ಪ ಹೊತ್ತಿಂಗೆ ಬಾರದಿರೆ
ಮನನೊಂದಿದೇಕೆ ತಳುವಿದನೆನ್ನ ಕಂದನೆಂ —
ದೆನುತ ಸುಯ್ಯುತ್ತ ಮಱುಗುತ್ತ ಬಸುಱಂ ಹೊಸೆದು
ಕೊನೆವೆರಳ ಮುಱಿದುಕೊಳುತ
ತನುವ ಮಱೆದಡಿಗಡಿಗೆ ಹೊಱಗನಾಲಿಸಿ ಮತ್ತೆ
ಮನೆಯೊಡತಿಗಂಜಿ ಕೆಲಸವನು ಮಾಡುತ್ತಿಪ್ಪ
ವನಿತೆಗಾದಾಪತ್ತನಾಲಿಸದೆ ಕೆಟ್ಟ ದ
ಟ್ಟಸುವರ್ಕದನೇನೆಂಬೆನು ॥ ೯

ಒಳಗುಡಿದ ನಾರಾಚದೇಱಿನಂದದಿ ಹೊಱಗೆ
ಬಳಸದೊಳಗೊಳಗೇಗುವಾವಗೆಯ ಶಿಖಿಯಂತೆ
ಕೆಳೆಗೊಂಡ ಹಗೆಗಳೊಳಗಣ ಮುಳಿಸಿನಂದದಿಂ
ಮನೆಯವರ ಮಾರಿಗಂಜಿ ।
ಬಳಸಿ ಬಿರಿವೆದೆ ಬಿಕ್ಕುವಿಕ್ಕೆ ಕಣ್ಣೊಳೊಱೆವ
ಜಲ ಸೆರೆಗಳೊಡೆದುಬ್ಬಿ ಬಿಗಿದು ಗಂಟಲಿನ ಮು
ಕ್ಕುಳಿಸಿದಕ್ಕೆಗಳೆಸೆವ ಸತಿಯುಳಲು ಸೀಗೆಯೊಳ
ಗಣ ಬಾಳೆಗೆಣೆಯಾದುದು ॥ ೧೦

ಅಡವಿಯೊಳು ಹೊಲಬುಗೆಟ್ಟನೊ ಗಿಡುವಿನೊಳಗೆ ಹುಲಿ
ಹಿಡಿದುದೋ ಕಳ್ಳರೊಯ್ದರೊ ಭೂತಸಂಕುಲಂ
ಹೊಡೆದುವೋ ನೀರೊಳದ್ದನೊ ಮರದ ಕೊಂಬೇಱಿ
ಬಿದ್ದನೋ ಫಣಿ ತಿಂದುದೋ ।
ಕಡುಹಸಿದು ನಡೆಗೆಟ್ಟು ನಿಂದನೋ ಎಂದಿಂತು
ಮಡದಿ ಹಲವಂ ಹಲುಬುತ್ತಂಗಣವೊಳಿರೆ ಹೊತ್ತು
ಹೊಡಕರಿಸಿದಳಲ ಕರ್ಬೊಗೆಯಂತೆ ಕವಿವ ಕ
ತ್ತಲೆಯೊಳಗೆ ನಿಂದಿರ್ದಳು ॥ ೧೧

ಬಂಮರಂ ಲೋಹಿತಾಶ್ವಾ ಎಂದು ಬಟ್ಟೆಯೊಳು
ನಿಂದರಂ ಲೋಹಿತಾಶ್ವಾ ಎಂದು ಗಾಳಿ ಗಿಳಿ
ಕೆಂದಡಂ ಲೋಹಿತಾಶ್ವಾ ಎಂದು ಕರೆಕರೆದು
ಬಿಡೆ ಬೀದಿಗಳುವಿನಂತೆ।
ಮಂದಮತಿಯಾಗಿರ್ದ ಚಂದ್ರಮತಿಗೊಬ್ಬನೆ
ಯ್ತಂದೆಂದು ಕೂಡೆ ಹೋಗಿರ್ದ ಕಂಡೆನಿನ್ನ
ಕಂದನೊಂದುಗ್ರಫಣಿ ತಿಂದು ಜೀವಂಗಳೆದ
ನೆಂದು ಹೇಳಿದನಾಗಳು ॥ ೧೨

ಏಕೆ ಕಚ್ಚಿತ್ತಾವ ಕಡೆಯಾವ ಹೊಲನಕ್ಕ
ಟಾ ಕುಮಾರಂ ಮಡಿದ ಠಾವೆನಿತು ದೂರವೆನ
ಲೀ ಕಡೆಯೊಳೀ ಹೊಲದೊಳೀ ಮರದ ಕೆಲದ ಹು
ತ್ತಿನ ಹುಲ್ಲ ಕೊಯ್ಯೆ ಕೈಯ।
ನೂಕಿ ಫಣಿಯುಗಿಯೆ ಕೆಡೆದಂ ದೂರವಲ್ಲಲ್ಲ
ಬೇಕಾದಡೀಗ ಹೋಗಲ್ಲದಿರ್ದಡೆ ಬಳಿಕ
ನೇಕ ಭಲ್ಲುಕ ಜಂಬುಕಂ ಘೂಕ ವೃಕಗಳೆಳೆ
ಯದೆ ಬಿಡವು ಕೇಳೆಂದನು ॥ ೧೩

ನುಡಿಯುಳುರಿದೆನಿಸಿ ಮೇರೆಯ ಮೀಱುವಳಲನಳ
ವಡಿಸಿ ಬಂದೊಡೆಯನಡಿಗಳ ಮೇಲೆ ಕೆಡೆದು ಬಾ
ಯ್ವಿಡುತರಣ್ಯದೊಳೆನ್ನ ಮಗನುಗ್ರಕಾಳೋರ
ಗಂ ಕಚ್ಚೆ ಮಡಿದನೆಂದು।
ನುಡಿಯೆ ಲೇಸಾಯ್ತು ಮಡಿದರೆ ಮಡಿದನೆಂದು ಕೆಡೆ
ನುಡಿಯೆ ಬಂಟರನು ಕೊಟ್ಟಟ್ಟಿಸಿಸೈ ತಂದೆ ಎನೆ
ನಡುವಿರುಳು ಬಂಟರುಂಟೇ ನಿದ್ರೆಗೆಯ್ವಬೇ
ಕೇಳು ಕಾಡದಿರೆಂದನು ॥ ೧೪

ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ
ಕರುಣಿಸೆನೆ ದುರ್ಮರಣವಟ್ಟ ಶೂದ್ರನನು ಸಂ
ಸ್ಕರಿಸುವವರ್ಥಾವಲ್ಲನೆಂದೆನಲ್ಕಾನಾದ
ಡಂ ಹೋಗಿ ಕಂಡು ಮಗನ ।
ಉರಿಗಿತ್ತು ಬಪ್ಪೆನೇ ಏನೆ ಕೆಲಸಮಂ ಬಿಟ್ಟು
ಹರಿಯದಿರ್ದುದನೆಯ್ದೆ ಗೆಯ್ದು ಹೋಗೆನಲು ಚ
ಚ್ಚರದಿ ಮಾಡುವ ಕಜ್ಜವೆಲ್ಲವಂ ಮಾಡಿ ಹೊಱ
ವಂಟಳೊಯ್ಯನೆ ಮನೆಯನು ॥ ೧೫

ದಟ್ಟೈಸಿ ಮಡಲಿಱಿವ ಕಾಳದೊಳು ನಡುವಿರುಳು
ನಟ್ಟ ಮುಳ್ಳುಗಳನೆಡಹಿದ ಕಲ್ಲ ಹಾಯ್ದು ಮುರ
ಮು[1]ಟ್ಟನೇಱಿದ ದಡನನಿಳಿದ ಕುಳಿಯಂ ಬಿದ್ದ
ದರಿಗಳಂ ಹಿಡಿದಣಗಿಡುವ ।
ಬಿಟ್ಟ ತಲೆಯಂ ಬಿಚ್ಚಿದುಡಿಗೆಯಂ ಮಱೆದು ಗೋ
ಳಿಟ್ಟು ಬಾಯ್ಬಿಟ್ಟು ನೊಱೆಯಿಡುತ ನಡೆತಂದು ಹುಲು
ವಟ್ಟೆಯೊಳು ಬೆಳೆದ ಹೆಮ್ಮರನ ಮುಲಗಿಸಿ ನಿಂದ
ಹುಳ್ಳಿಹೊಱೆಯಂ ಕಂಡಳು ॥ ೧೬

ಈಯೆಡೆಯೊಳಿನ್ನಿರದೆ ಮಾಣನೆನುತಂ ಬಂದು
ತಾಯಿ ಕರೆದಳು ಮಗನೆ ಮಗನೇ ಹರಿಶ್ಚಂದ್ರ
ರಾಯನ ಕುಮಾರ ಪೇಳಾವ ಠಾವ್ನೊಳಕೊಂಡು
ದಯ್ಯ ನೀನೆಲ್ಲಿರ್ದಪೆ ।
ಓಯೆಂಬುದೇನು ಕಂದಾ ಬಾಯ ಬಿಡದಿತ್ತ
ಬಾಯೆಂಬುದೇನು ತಂದೇ ಎನ್ನನೊಲ್ಲದಡೆ
ಸಾಯೆಂಬುದೇನುಸುರದಿರಲೇಕೆ ತರುಣ ಎಂ
ದೊಱಲಿದಳು ಹಂಬಲಿಸುತ ॥ ೧೭

1 ಮು (ಕ.), ಮ (ಖ.ಗ.), ಮ (ಘ.ಪ.)

ವಿಷದ ಹೊಗೆ ಹೊಯ್ದು ಹಸುರಾದ ಮೈ ಮಿಱುಂ ನೊರೆ
ಯೊಸರ್ವ ಗಲ್ಲಂ ಕಂದಿದುಗುರ್ಗಳೆರೆದೆಱೆದುಗು
ರ್ವಿಸುವ ಕಣ್ ಹಱಿದು ಹುಲುಹಿಡಿದ ಹರಹಿದ ಕೈಗ
ಳುಂಬ ಹೊತ್ತುಣಹಡೆಯದೆ ।
ಹಸಿದು ಬೆಂಗಡರ್ದ ಬಸುಱ ಕಟಕಟ[1]ಮುಡಿದ[1] ಗೋಣ್
ದೆಸೆಗುರುಳಿ ಹುಡಿಹೊಕ್ಕು ಬಱಿತ ಬಾಯ್ವೆರಸಂದು
ಬಸವಳಿದ ನಿಜಸುತನ ಕಂಡಳು ಹರಿಶ್ಚಂದ್ರ
ನರಸಿ ಹುತ್ತಿನ ಮೊದಲೊಳು ॥ ೧೮

ಕಂಡ ಕಾಣ್ಕೆಯೊಳು ಶಿವಶಿವ ನಿಂದ ನಿಲವಿನಲಿ
ದಿಂಡುಗೆಡೆದಳು ಮೇಲೆ ಹೊರಳಿದಳು ಬಿಗಿಯಪ್ಪಿ
ಕೊಂಡು ಹೊಟ್ಟೆಯನು ಹೊಸೆಹೊಸೆದು ಮೋಱೆಯ ಮೇಲೆ
ಮೋಱೆಯಿಟ್ಟೋವದೊಱಲಿ ।
ಮುಂಡಾಡಿ ಮುದ್ದುಗೆಯ್ದೋರಂತೆ ಕರೆದು ಕರೆ
ದ್ಗಂಡಲೆದು ಲಲ್ಲೆಗಱೆದತ್ತತ್ತು ಬಲವಳಿದು
ಬೆಂಡಾಗಿ ಜೀವವಿಕ್ಕೆಂಬಾಸೆಯಿಂ ತೇಂಕು
ದಾಣಂಗಳಂ ಬಗೆದಳು ॥ ೧೯

ಲಲನೆ ಮೂಗಿನೊಳುಸುರನಳ್ಳೆಯೊಳು ಹೊಯ್ಲನಂಗು
ರೊಳು ರಜವನೆದೆಯೊಳೆಲ್ಲಾಟಮಂ ಕೈಯ ಮೊದ
ಲೊಳು ಮಿಡುಕನಂಗದೊಳು ನೋವನಕ್ಷಿಯೊಳು ಬೆ
ಳ್ಪಂ ಭಾಳದೊಳು ಬೆಮರನು ।
ಲಲಿತಕಂಠದೊಳುಲುಕನಂಘ್ರಿಯೊಳು ಬಿಸಿಯನಂ
ಗುಳಿಗಳೊಳು ಚಿಟುಕನಂಗುಟದೊಳರುಣಾಂಬುವಂ
ಸಲೆ ನಾಲಗೆಯೊಳಿಂಪ ಧ್ರೋಮದಲಿ ಬಲ್ಪನಾ
ರಯ್ದು ಕಾಣದೆ ನೊಂದಳು ॥ ೨೦

---

1 ಮುಱಿದ (ಪ.)

ಹಡೆದೊಡಲು ಹುಡಿಯಾಯ್ತು ಮಗನೆ ಮಗನ್ನುಂಟೆಂದು
ಕಡಗಿ ಹೆಚ್ಚುವ ಮನಂ ಹೊತ್ತಿ ಹೊಗೆಯಿತ್ತು ಬಿಡ
ದೆಡರಿ ನಿಟ್ಟಿಸಿ ನಲಿವ ದಿಟ್ಟಿ ಕೆಟ್ಟುವು ಸೋಂಕಿ
ಪುಳಕಿಸುವ ಕರಣಂಗಳು ।
ಕಡಿವಡೆದುವೊಸೆದು ಹೆಸರ್ಗೊಳುತಿಪ್ಪ ನಾಲಗೆಯ
ಕುಡಿ ಮುರುಟಿತ್ತೊಮ್ಮೆಮ್ಮೆ ನುಡಿಯನಾಲಿಪ ಕಿವಿಯ
ಹಡಿಗೆತ್ತುದೆಲೆ ಕಂದ ಎಂದೆನುತ್ತಿಂದುಮುಖಿ
ಮಱುಗಿ ಬಾಯ್ಬಿಟ್ಟಳೆಂದು ॥ ೨೧

ಸಿರಿಹೋದ ಮಱುಕವನು ನೆಲೆಗೆಟ್ಟ ಚಿಂತೆಯನು
ಪರದೇಶಮಂ ಹೊಕ್ಕ ನಾಚಿಕೆಯನೆಱೆಯದ
ನ್ಯರ ಮನೆಯ ತೊತ್ತಾದ ಭಂಗವನು ನಿಮ್ಮಯ್ಯ
ಗೆಜ್ಞಾತವಾದೆಳಲನು ।
ನೆರೆದು ಮನೆಯವರೆಯ್ದೆ ಕರಕರಿಪ ದುಃಖವನು
ತರಳ ನಿನ್ನಂ ನೋಡಿ ಮಱೆದು ಪರಿಣಾಮವಂ
ಧರಿಸುತಿರ್ಪೆನ್ನ ಗೋಣಂ ಕೊಯ್ದೆ ಇನ್ನಾರ
ನೋಡಿ ಮಱೆದಪೆನೆಂದಳು ॥ ೨೨

ಅತಿಲಜ್ಜೆಗೆಟ್ಟನ್ಯರಾಳಾಗಿ ದುಡಿದು ಧಾ
ನತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರಭೂ
ಪತಿ ನಮ್ಮ ಬಿಡಿಸುವಾರ್ತದ ಮೋಹದಿಂ ಹಸಿವು
ನಿದ್ದೆಯಂ ತೊಱೆದು ಬಂದು ।
ಸುತನ ಕರೆಯೆಂದಡೇನೆಂಬೆನಾವುದ ತೋಱು
ಪತಿಯ ಮಱುಕವನು ಮಱೆಯಿಸುವೆನುಗ್ರಾಹಿಗಾ
ಹುತಿಯಾದನೆಂದು ಪೇಳ್ವೆನೆ ಎನ್ನ ಕಂದ ಎಂ
ದಿಂದುಮುಖಿ ಬಾಯ್ಬಿಟ್ಟಳು ॥ ೨೩

## ೮. ರೋಹಿತಾಶ್ವನ ಮರಣ, ಚಂದ್ರಮತಿಯ ದುಃಖ

ಮಂದಾನಿಲರಗಳೆ

ಏವೇನೇವೇನೆಲೆ ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ
ಇಱಿದೆಯಲಾ ಎನ್ನನು ಸುಕುಮಾರಾ
ಕೊಱೆದೆಯಲಾ ಕೊರಳನು ಜಿತಮಾರಾ
ಎತ್ತಣ ಬಱಿಸಿಡಿಲೆಱಗಿತೊ ನಿನ್ನ
ಹುತ್ತಿನ ಹತ್ತಿರೆ ಒಱಗಿದೆ ಚೆನ್ನ
ಹಾವು ಪಿಡಿಯೆ ಹಾ ಎಂದೊಱಲಿದೆಯಾ
ಸಾವಾಗವ್ವಾ ಎಂದೞಲಿದೆಯಾ

ರನ್ನದ ಕನ್ನಡಿ ಸಿಡಿದುದೊ ದೇವಾ
ಹೊನ್ನಕಳಸ ಕೆಡೆ[ದೊ][1]ಡೆದುದೊ ದೇವಾ
ಎನ್ನ ಕಡವರಂ ಸೂಱೆಹೋಯಿತೋ
ಹೊನ್ನ ಪ್ರತಿಮೆಯುಸು ಹಾಱಿಹೋಯಿತೋ
ಇನವಂಶದ ಲತೆ ಕುಡಿಮುರುಟಿತ್ತೋ
ಜನಪನಿಟ್ಟ ಸುರತರು ಮುಱಿಯಿತ್ತೋ
ಕಾಲ ಕರುಣವಿಲ್ಲದೆ ನೀನೊಯ್ದು
ಬಾಲನನಗಲಿಸಿ ಕೊರಳಂ ಕೊಯ್ದು
ಆರ ಸಿರಿಯನೆಳೆತಂದೆನೊ ಮುನ್ನ
ಆರೞಲಲು ಸೆಳೆಕೊಂಡೆನೊ ಹೊನ್ನ
ಅಲ್ಲದಡೇಯುೞಿಪ್ಪುದೆ ನನಗೆ
ಇಲ್ಲಿ ವೃಥಾ ಸಾವಪ್ಪುದೆ ನಿನಗೆ
ಹೆತ್ತ ಹೊಟ್ಟೆಯುರಿಯುತ್ತಿದೆ ಮಗನೆ
ಎತ್ತಿದ ತೋಳನು ಕೆತ್ತಿದೆ ಮಗನೆ
ಹಾಡುವ ಬಾಯಲಿ ಮಣ್ಣನು ಹೊಯ್ದು

1 ಯೊ (ಖ.ಗ.)

ನೋಡುವ ಕಣ್ಣಲಿ ಸುಣ್ಣವ ಹೊಯ್ದ
ಪಾಪಿಯೆನ್ನ ನೀನೊಮ್ಮೆ[ಗೆ] ನೋಡಾ
ಕೋಪವನುಳಿದೊಯ್ಯನೆ ಮಾತಾಡಾ
ನುಡಿದಡೆ ಪಾಪವೆ ಹೆತ್ತವರೊಡನೆ
ಕಡುಮುಳಿಸೇ ಮಗನೇ ಎನ್ನೊಡನೆ

ಬಾರೈ ಬಹಳ ಸಿರಿಯ ಸಿಂಗಾರ
ಬಾರೈ ಸುಜನಜನಕ್ಕಾಧಾರ
ಏಳೆನ್ನಾನಂದಾಮೃತಶರಧಿ
ಏಳಖಿಳಗುಣಾರ್ಣವಕಳಾನಿಧಿ
ಹಲ್ಲಣಿಸಿದ ವಾರುವವಿದೆ ಮಗನೆ
ಮಲ್ಲಾಮಲ್ಲಿಯ ರಥವಿದೆ ಮಗನೆ
ಗಜಘಟೆಗಳು ಹಲ್ಲಣಿಸಿವೆ ಮಗನೆ
ನಿಜಪರಿವಾರಕೆ ಬೆಸಗೊಡು ಮಗನೆ
ನೆತ್ತರ ಕಡಲೊಳಗಿಭಕುಲ ಬೀಳೆ
ಮೊತ್ತದ ತುರಗಂಗಳು ಬೆಂಡೇಳೆ
ಮಣಿಮುಕುಟದ ಭಟರೆಟ್ಟೆಗಳಾಡೆ
ಮಣಿದು ಭೂತಸಂಕುಳ ಕುಣಿದಾಡೆ
ನಾರಿಮೃತ್ಯುಗಳಿಗೋಕರೆ ಹುಟ್ಟೆ
ಕ್ರೂರ ಜವಂಗತಿಭೀಕರ ಹುಟ್ಟೆ
ರಿಪುಬಲವಂ ಕೊಂದಳಿದಡೆ ತಪ್ಪೆ
ತಪನಕುಲದ ವಿಜಯಶ್ರೀಯೊಪ್ಪೆ
ಧರೆಯನಾಳ್ವ ಸಿರಿಯಂ ಕಳೆದಿಂದು
ಉರಗನ ವಿಷದಗ್ನಿಯೊಳುಜಿ಼ ಬೆಂದು
ಅಡವಿಯೊಳೀಪರಿ ಕೆಡೆವರೆ ವೀರ
ಪೊಡವಿಯೊಡೆಯನಗ್ಗದ ಸುಕುಮಾರ

ಏನು ಮಾಳ್ಪೆ ನಾ ಮಾಡಿರ್ದುದನು
ತಾನುಂಬುದು ವಿಧಿ ಮಾಡಿದ ಹದನು
ಕರುಣಿಸಿ ಕಾಯ್ವೆ ಗೌರೀರಮಣ
ನರಕಿಯ ನೋಡೆಲೆ ಅಗಜಾರಮಣ
ಕರುಣಿಸು ಪಾಪಿಯ ಪಂಪಾಪತಿಯೆ
ಕರುಣಿಸನಾಥೆಗೆ ಕಾಶೀಪತಿಯೆ ॥

ಇನ್ನಿನಿತಱಿಂದ ಮೇಲೆನ್ನೊಡೆಯನಱಿಸಿ ಬಂ
ದೆನ್ನನೊಯ್ದಡೆ ಬಳಿಕ ಸುಡಹಡೆಯೆನೆಂಬುದನು
ತನ್ನಲ್ಲಿ ತಾನೆ ತಿಳಿದೆದ್ದು ಪುತ್ರನ ಶವವ
ಹೊತ್ತು ದೆಸೆದೆಸೆಗೆ ತಿರುಗಿ।
ಮುನ್ನೆಲ್ಲರಂ ಸುಡುವ ಠಾವಾವುದೆಂದು ನೋ
ಳ್ಪನ್ನೆಗಂ ಹಲವುಕೆಲವುರಿಯ ಬೆಳಗಂ ಕಂಡು
ನನ್ನಿಕಾಱಂ ಕಾವ ಕಾಡತ್ತ ನಡೆವಾಗ
ಬಟ್ಟೆಯೊಳ್ದೇವೊಗಳ್ವಿನು ॥ ೨೪

ಕೆಡೆದ ಮುಂಡದ ಬಿದ್ದ ತಲೆಯ ಚೆಲ್ಲಿದ ಕರುಳ
ಪಡಲಿಟ್ಟ ಕಾಳಿಜದ ಮಿದುಳ ಕೋಳ್ಗಿಸಱ ಹೊನ
ಲಿಡುವ ರಕುತದ ಕಡಲೊಳಡಿಯಿಡಲು ಬಾರದೆಂ
ಬಂತೆ ವಿಶ್ವಾಮಿತ್ರನು।
ಅಡವಿಯೊಳಗೆಯ್ದೆ ನಾನಾ ಭಯಂಕರವ ಸಾ
ಲಿಡಲದನು ಪುತ್ರಶೋಕಗ್ರಹಾ[1][ವಿಷ್ಟ][1]ತೆಯ
ಕಡುಪಿನಿಂ ಲೆಕ್ಕಿಸದೆ ಬಂದು ಸುಡುಗಾಡೊಳಿಳು
ಹಿದಳು ತನಯನ ಶವವನು ॥ ೨೫

1 ವೇಷ್ಟ (ಕ.ಘ.), ನಿಷ್ಟ (ಖ.ಗ.), ವೇಷ್ಟಿ (ಪ.)

ಗಳಗಳನೆ ಮುನ್ನ ಬೆಂಥುಳಿದಿರ್ದ ಕರಿಗೊಳ್ಳಿ
ಗಳನೆಲ್ಲವಂ ಸಿದುಗಿ ತಂದೊಟ್ಟಿ ಮೇಲೆ ಮಂ
ಗಳಮಯ ಕುಮಾರನಂ ಪಟ್ಟಿರಿಸಿ ಕೆಲದೊಳುರಿ
ವಗ್ನಿಯಂ ಪಿಡಿದು ನಿಂದು।
ಬೆಳೆದಲ್ಲಿ ಬೆಳೆ ಹುಟ್ಟಿದಲ್ಲಿ ಹುಟ್ಟೆಂದು ನುಡಿ
ದಿಳುಹಲೆನುಗೆಯ್ದುಳುಹಲಾಱದಳವಳಿದು ಬಾ
ಯಳಿದು ಮೊಱೆಯಿಟ್ಟಡಾ ದನಿಗೇಳ್ದು ನಿದ್ರೆತಿಳಿ
ದೆದ್ದು ಬಂದನು ಭೂಪನು ॥ ೨೬

ನಟ್ಟಿರುಳು ಸುಡುಗಾಡೊಳೊಬ್ಬಳೋರಂತೆ ಬಾ
ಯ್ವಿಟ್ಟು ಹಲುಬುವ ವೀರನಾರಿಯಾವಳೊ ಮಾಱೆ
ಸುಟ್ಟಿಯಾದಡೆ ನಿನಗೆ ವೀರಬಾಹುಕನಾಣೆ
ಕದ್ದು ಸುಡಬಂದೆ ನಿನ್ನ।
ನಿಟ್ಟೆಲುವ ಮುಱೆವೆನೆಂದುರವಣಿಸಿ ಜಱೆಯುತ್ತ
ದಟ್ಟಿಸುತ ಬಂದು ಹಿಡಿದಿರ್ದ ಕಿಚ್ಚಂ ಕೆದಱೆ
ಮುಟ್ಟಿಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು
ಸೆಳೆದು ಬಿಸುಟಂ ಭೂಪನು ॥ ೨೭

ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ
ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತ
ಕ್ಕಿಸಿಕೊಂಡು ಕುಲವ ನೋಡದೆ ಬೇಡಿಕೊಂಬೆನಿವ
ನೆನ್ನ ಮಗನಲ್ಲ ನಿನ್ನ।
ಸಿಸುವಿನೋಪಾದಿ ಸುಡಲೆನುಮತವನಿತ್ತು ರ
ಕ್ಷಿಸು ಕರುಣಿ ಎಂದಡೆಲೆ ಮರುಳೆ ಹೆಣನುಟ್ಟುದಂ
ಮಸಣವಾಡಗೆಯ ಹಾಗವನು ಕೊಟ್ಟಲ್ಲದೇ
ನೆಂದಡಂ ಬಿಡೆನೆಂದನು ॥ ೨೮

ಕೊಡಲೇನುವಿಲ್ಲವಿಂತೆನಗೆ ಲೋಗರ ಮನೆಯ
ಬಡದಾಸಿ ಕರುಣಿಸೆನೆ ನಿನ್ನ ಕೊರಳೊಳಿರ್ದ
ಕಡುಚೆಲುವ ತಾಳಿಯನ್ನೆದನ್ನಡವನಿರಿಸಿ ನೀ
ಬಿಡಿಸಿಕೋ ಬಳಿಕವೆನಲು।
ಮಡದಿ ಕರನೊಂದಕಟ ಪೊಡವಿಪತಿ ಮಡಿದ ಕೇ
ಡಡಸಿತಲ್ಲದಡೆನ್ನ ಗುಪ್ತಮಂಗಳಸೂತ್ರ
ವೆಡೆಯ ಹೊಳೆಹೊಳೆವೈದೆದಾಳಿಯನಿದಂ ಶ್ವಪಚ
ನೆಂತು ಕಂಡಪನೆಂದಳು ॥ ೨೯

ವಿಗತಸಪ್ತದ್ವೀಪಪತಿಯ ಬಸುರಲಿ ಬಂದು
ಮಗನೆ ನಿನಗೊಮ್ಮೆಟ್ಟು ಸುಡುಗಾಡು ಹಗೆಯಾಯ್ತು
ಮಿಗೆ ಸಕಲಲೋಕದೊಳು ತನ್ನಾಣೆ ಸಲುವನ ಕು
ಮಾರನೆನಿಸುವ ನಿನ್ನನು।
ಬಗೆಯದೀ ಚಂಡಾಲನಾಣೆಯಿಡುವಂತಾಯ್ತು
ಜಗದ ನವನಿಧಿಗೊಡೆಯನಾತ್ಮಭವನೆನಿಸಿ ಮು
ಟ್ಟಿಗೆಯ ಸುಂಕದ ಹಾಗವಿಲ್ಲಾಯ್ತು ಮಗನೆ ಎಂ
ದಳಲಿದಳು ಹಂಬಲಿಸುತ ॥ ೩೦

ವನಿತೆಯುಳಲಂ ಕೇಳ್ದು ನಡುಗಿ ವಿಶ್ವಾಮಿತ್ರ
ಮುನಿಯೆನಗೆ ಮತ್ತೆ ಮಾಡಿದ ತೊಡಕಿದಾಗದಿರ
ದೆನುತ ಮನದೊಳು ಮಱುಗುತಾವ ಲೋಕದೊಳಾಣೆ
ಸಲುವುದೆನಿಸುವ ಭೂಪನ।
ತನಯನೀ ತರಳನೆಲೆ ತರುಣಿ ನೆಲದೆಱೆಯನಿ
ಕ್ಕೆನಲು ಕೊಡಲಿಲ್ಲದಧಿಕರ ಪೆಸಗೊಳಲು ಬಿಡು
ವೆನೆ ಶೋಕಿಸುವ ಹೊತ್ತು ಹುಸಿದು ಶೋಕಿಸುವೊಡ್ಡೇ
ನಹುದೆಂದನವನೀಶನು ॥ ೩೧

ಹಿಂದುಳಿದ ಸಂಪದವನೆಣಿಸುವುದು ಹುಸಿಯಲ್ಲ
ವಿಂದೀಗ ತೋಱಬಪ್ಪುದೆ ಹುಸಿಯದ್ದುಂಟೆ ತ
ಪ್ಪೆಂದಡದಕೇನಾತನಾರ ಮಗನಾವ ಪೆಸ
ರಾವ ನಾಡರಸನೆನಲು।
ಸಂದ ರವಿಕುಲತಿಲಕನೆನಿಪಾ ತ್ರಿಶಂಕುವಿನ
ನಂದನನಯೋಧ್ಯಾಧಿಪತಿ ಹರಿಶ್ಚಂದ್ರನೆನೆ
ನೊಂದಾತನಂಗನೆಕುಮಾರರೇನಾದರೆ
ಲ್ಲಿರ್ದಪರು ಹೇಳೆಂದನು ॥ ೩೨

ಪೊಡವೀಶ್ವರಂ ಹಿಂದೆ ಹರಸಿ ಹಾಳಂ ಬಿಟ್ಟು
ಹಡೆದ ಸುತನೀತನಾತನ ವನಿತೆ ನಾನೆನಲು
ಮಡಿದ ಕಾರಣವಾವುದೀ ತನಯನೆಂದಡೆ
ವಿಮ್ಮಬ್ಬರಂ ಮಾಱುಗೊಂಡ।
ಒಡೆಯನರಮನೆಗೆ ಹುಲುಹುಳ್ಳಿಯಂ ತಪ್ಪೆನೆಂ
ಧಡವಿಗೆಯ್ದಿದಡಲ್ಲಿ ಕಾಳೋರಗಂ ಕಚ್ಚಿ
ಮಡಿದನೀ ಕಂದನೀ ವಿಧಿಗೆ ಸೇರಿತು ಹರಿ
ಶ್ಚಂದ್ರನಿರವೇನೆಂದಳು ॥ ೩೩

ನುಡಿಯಲಱಿಯದೆ ಸಕಲರಾಜ್ಯಮಂ ಹೋಗಾಡಿ
ಕಡೆಗಧಿಕ ಋಣಿಯಾಗಿ ನೆಲೆಗೆಟ್ಟು ಮಂತ್ರಿವೆರ
ಸಡವಿಗುಱಿಯಾಗಿ ಕೈವಿಡಿದ ಸತಿಪುತ್ರರಂ
ಮಾಱಿ ಸುಕ್ಷೇತ್ರದೊಳಗೆ।
ಕಡೆಗೆ ಚಂಡಾಲಕಿಂಕರನಾಗಿ ದೋಷಕ್ಕೆ
ನಡುಗದೆ ಕುಲಾಚಾರಮಂ ಬಿಟ್ಟು ಜನಕೆ ನಗೆ
ಗೆಡೆಯಾದ ಪಾತಕ ಹರಿಶ್ಚಂದ್ರನವನನೇ
ನೆಂದು ನೆನೆದಪೆಯೆಂದನು ॥ ೩೪

ಜಡೆವೊತ್ತಡಂ ಹಸಿಯ ತೊವಲುಟ್ಟಡಂ ನಾಡ
ಸುಡುಗಾಡಿನೊಳಗಿರ್ದಡಂ ನರಕಪಾಲನುಂ
ಪಿಡಿದಿರ್ದಡಂ ತಿರಿದು ವಿಷವುಂಡಡಂ ಶವಶಿ
ರೋಮಾಲೆಗಟ್ಟಿರ್ದಡಂ।
ಕಡು ಮುರುಳ್ಪಡೆಯ ಸಂಗಡ ಬತ್ತಲಿರ್ದಡಂ
ಮೃಡನಲ್ಲದಖಿಲಲೋಕಕ್ಕೊಡೆಯನಿಲ್ಲೆಂಬ
ನುಡಿಯಂತಿರೆನಗಾ ಹರಿಶ್ಚಂದ್ರನಲ್ಲದೆ
ನ್ನಾರು ಗತಿಮತಿಯೆಂದಳು ॥ ೩೫

ಋಜುವಬಲೆಯುಚಿತವಚನಂ ಕರ್ಣಪಥದಿನೊಳ
ಗೆಱಗಿ ಚಿತ್ತವನು ತೊತ್ತಳದುಳಿದು ಧೈರ್ಯಮಂ
ಬಱಿಕೈದು ಕರಣಂಗಳಂ ಕದಡಿ ಹೆಮ್ಮೆಯಂ
ಹಱಿದಳಲನೊದೆದೆಬ್ಬಿಸಿ।
ಮಱುಕಮಂ ಮಸೆದು ಕಂಬನಿವೊನಲ ಕೋಡಿಯಂ
ಕೊಱೆದು ಮತಿಗೆತ್ತಿಮಾಯೆಯಂ ತೋಱಿ ಮೀಱಿ ನೇ
ಸಱ ಕುಲಜನೋರಂತೆ ಸಿಗ್ಗಾಗಿ ತಾ ಮಾಡಿ
ದಪರಾಧಮಂ ನೆನೆದನು ॥ ೩೬

ಈ ಸತಿಯನೀ ಶುಚಿಯನೀ ಪತಿವ್ರತೆಯ ನಾ
ನೀಸು ಧಾವತಿಗೊಳಗುಮಾಡಿದೆನು ನೀಚದ್ವಿ
ಜೇಶಂಗೆ ಮಾಱಿ ಮಱೆದೀ ಸುತನನೀ ಸುಖಿಯ
ನೀ ಸೊಬಗ ಸುಕುಮಾರನ।
ಓಸರಿಸದುರಗ ಕೊಲುವಂತೆ ಮಾಡಿದೆನೆಂಬ
ಹೇಸಿಕೆಯ ವಾರಾಶಿ ತುಂಬಿ ತುಳುಕಾಡಿ ಹೊಱ
ಸೂಸುವಳಲಂ ನಿಲಿಸಿ ನಿಲಿಸಲಾಱದೆ ಮಗನ
ಮೇಲೆ ದೊಪ್ಪನೆ ಕೆಡೆದನು ॥ ೩೭

ತನಗೆ ಹೊಯ್‌ಕೈಯಪ್ಪ ಭೂಭುಜರನೋಲೈಸಿ
ಧನವನಾರ್ಜಿಸಿ ತಂದು ಸೆಱೆಯ ಬಿಡಿಸುವನೆಮ್ಮ
ಜನಪನೆಂದಾನಿರಲು ಮಾದಿಗಂಗಾಳಾಗಿ
ಸುಡುಗಾಡ ಕಾವ ಭಾಗ್ಯ।
ನಿನಗಾಯ್ತು ಭೂಪಾಲ ಎಂದು ದುಃಖಕ್ಕೆ ಪು
ತ್ರನ ಶೋಕದುರಿಗೆ [1]ತನು ಹೇವರಿಸಿ ವನಿತೆ ತಾ
ಮನನೊಂದು ಬೆಂದು ಬೆಱಗಾಗಿ ಚಿಂತಿಸುತ[1] ತೂ
ಕದ ಕೋಲ ತೊಲೆಯಾದಳು ॥ ೩೮

ಪ್ರಕಟರಾಜ್ಯಭ್ರಷ್ಟನಾಗಿ ಚಂಡಾಲಸೇ
ವಕನಾದ ಪಾಪಿಯಂ ನೀಚನನ್ನನೂನಪಾ
ತಕನನೆನ್ನಂ ಪೋಲ್ತು ಕೆಡದೆ ನಿಮ್ಮಜ್ಜ ತ್ರಿ
ಶಂಕುಭೂವರನಂದದಿ।
ಸಕಲರಾಜ್ಯಕ್ಕೊಡೆಯನಾಗದಿರನೀ ಕುಮಾ
ರಕನೆಂಬ ನಂಬುಗೆಯೊಳಾನಿರಲು ಕಂದ ನೀ
ನಕಟ ನಿಷ್ಕಾರಣಂ ಮಡಿವರೇ ತಂದೆ ಎಂ
ದಳಲತೊಡಗಿದನರಸನು ॥ ೩೯

ಮುಂದೆ ನೀನಾಳಲಿಹ ಧರೆಯನನ್ಯರ್ಗಿತ್ತ
ನೆಂದು ನುಡಿಸೆಯೊ ಮತ್ತದಲ್ಲದೆನ್ನಿಬ್ಬರಂ
ತಂದು ಲೋಗರಿಗೆ ಮಾಱಿದನೆಂದು ನುಡಿಸೆಯೋ
ಚಾಂಡಾಲಸೇವೆಮಾಡಿ।
ನಿಂದೆಯಿಲ್ಲದ ಸೂರ್ಯಕುಲಕೆ ಕುಂದಂ ತಂದ
ನೆಂದು ನುಡಿಸೆಯೊ ನುಡಿಯದಿಹ ಹದನನೆಱಪ ಬೇ
ಕೆಂದೊಱಲಿ ಬಾಯ್ಬಿಟ್ಟು ಕರೆದು ಹಾರಿದನು ಸುತ
ನಲ್ಲಿ ಮಾಱುತ್ತರವನು ॥ ೪೦

1 ಸರಿಯಾಗಲರಡಕ್ಕಲ್ಲ। ದಸಿಸಿತ್ತ ವಚನದ ಫಲಂ ನುಡಿದುದು ವನಿತೆ (ಕ.ಖ ಗ)

ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾದು ಮಡಿದಾತನಲ್ಲ ದೇ
ವರಿಗೆ ಹಿತವಾಗಿ ಮಡಿದವನಲ್ಲ ಮಾಂಸದಾ
ನವ ಬೇಡಿದರ್ಗೊಡಲನು ।
ಅರಿದರಿದು ಕೊಟ್ಟು ಮಡಿದವನಲ್ಲ ಹುಳ್ಳಿಯಂ
ತರಹೋಗಿ ಕಾಡೊಳಗೆ ಬಡಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವ
ರೇ ಕಂದ ಹೇಳೆಂದನು ॥ ೪೮

ಮೇಗೆ ಮಗನೆರಸಾಗಬೇಕೆಂಬ ಮಱುಕದಿಂ
ಯಾಗಕ್ಕೆ ಸುತನನೊಡ್ಡಿಕ್ಕಲಾಱದೆ ಲೋಭಿ
ಯಾಗಿ ಮುನಿಪುತ್ರನಂ ಮಾಱುಗೊಂಡಿತ್ತನೆಂ
ಬಪಕೀರ್ತಿಯೇ ಉಳಿದುದು ।
ಲೋಗರ ಮಗನನಿಕ್ಕಿ ನೆಲೆಯ ನೋಡಿದನಕಟ
ಸಾಗುದುರೆಗೆಡಕಿದನು ಹುಲ್ಲನೊಣಗಿದ ಹಣ್ಣ
ಕಾಗೆ ಕದುಕಿತ್ತೆಂದು ಸಂದ ಜನ ನಿಂದೆಗೆ
ಯ್ವಂದವಾಯ್ತೆನಗೆಂದನು ॥ ೪೯

ಸುತನ ರೂಪಿನ ಸೊಬಗನಂಗಸುಕುಮಾರದ್ಯು
ನ್ನತಿಯ ಬಾಲ್ಯದ ಚೆಲುವನೆಲ್ಲಾ ಕಳಾಪ್ರವೀ
ಣತೆಯ ಗರುವಿಕೆಯ ಗಾಡಿಯ ಧೃತಿಯನೊಟ್ಟಜೆಯ
ನೆಳವಟ್ಟ ನುಡಿಯ ಚದುರ ।
ನುತಲಕ್ಷಣಾವಳಿಯನಧಿಕಗುಣಗಣವನಾ
ಯತಿಗೆಟ್ಟು ನೆನೆದು ಶೋಕಿಪೆನೆಂದಡಾ ಕಲ್ಪ
ಶತವೆಯ್ದದರಸ ದುಃಖವನು ಸಂತೈಸಿಕೊಂ
ಡೆನ್ನನವಧರಿಸೆಂದಳು ॥ ೫೦

ಪುದಿದಿರುಳು ಕಡೆಗಾಣ್ಬ ಕುಱುಹಾಗುತಿದೆ ಸೂರ್ಯ
ನುದಯಿಸಿದನಾದಡೆನ್ನವರೆನ್ನನೆಱಿಸಿ ತಳು
ವಿದಳೆಂದು ಕೊಲ್ಲದಿರರೇ ಕುಮಾರನನೀಗ
ದಹಿಸಬೇಕರಸ ಎಂದು।
ಸುದತಿ ನುಡಿಯಲು ನುಡಿದನವನೀಶ ತೆಱಿಯನಿ
ಕ್ಕದೆ ಸುಡಲ್ಬಾರದುಳ್ಳಡೆ ಕೊಡಿಲ್ಲದಡೆ ಬೇ
ಗದಿ ಹೋಗಿ ನಿನ್ನೊಡೆಯನಂ ಬೇಡಿ ತಾ ತಾರ
ದಿರೆ ಸುಡಲ್ಬೇಡೆಂದನು ॥ ೪೪

ಒಡೆಯರೀವವರಲ್ಲವೆನೆ ಬೇಡಿ ನೋಡಿ ಕೊಡ
ದಡೆ ಋಣಂಬಡು ಋಣಂ ಹುಟ್ಟದಿರ್ದಡೆ ಸುಡುವ
ಗೊಡವೆ ಬೇಡನ್ನೆಗಂ ಬಂದನಿತು ಬಕ್ಕೆಂದು
ತರುಣನುಟ್ಟುದನು ಕೊಂಡು।
ಪೊಡವೀಶ್ವರಂ ತಿರುಗಿ ತನ್ನ ಕಾಪಿನ ಗುಡಿಗೆ
ನಡೆಗೊಂಡನತ್ತಲಿತ್ತಲ್ ಪುರಕೆ ಬರುತಿಪ್ಪ
ಮಡದಿಗೆಡೆವಟ್ಟೆಯೊಳು ಬಂದ ಸಂಕಟವನಿ
ನ್ನಾವ ಜೀವರು ಕೇಳ್ವರು ॥ ೪೫

ಮುಂದೆ ಭೂಪನ ಸತಿಗುಪದ್ರವಂ ಮಾಡಬೇ
ಕೆಂದು ಕೌಶಿಕಮುನೀಂದ್ರಂ ನೆನೆದು ಚಿಂತಿಸು
ತ್ತೊಂದುಪಾಯಂಗಂಡು ಚೋರರಂ ಕೆಲಬರಂ
ನಿರ್ಮಿಸುತವರ್ಗೆಂದನು।
ಇಂದು ನೀವೀ ಪುರವನಾಳ್ವರಸನಣುಗನಂ
ಕೊಂದಾಕೆ ಬಪ್ಪ ಬಟ್ಟೆಯೊಳಿರಿಸಿ ಬನ್ನಿ ಹೋ
ಗೆಂದು ಬೆಸಸಲು ಯತಿಪನಾಜ್ಞೆಯಿಂದವದಿರೆ
ಯ್ತಂದು ಪೊೞಲಂ ಸಾರ್ದರು ॥ ೪೬

ಚೋರರೊಳ್ಪೊಕ್ಕು ಮಿಕ್ಕಾ ಪುರದ ಭೂಪನ ಕು
ಮಾರನಂ ಕೊಂಡೋಡಿಬಂದು ಗೊಂದಿಯೊಳೆಲಂ-
ಕಾರಮಂ ಕೊಂಬ ಭರದಿಂ ಕೊರಳನರಿಯಲ್ಕಾ
ಶಿಶುವೊಱಲಲ್ಕಾ ದನಿಯನು ।
ದೂರದಿಂ ಕೇಳ್ದೆನ್ನ ಮಗನಾಗದಿರನೆನು
ತ್ತಾರೋ ನಿರೋಧಿಸುವರೆಂದೋಜೆ ಹುಟ್ಟದವಿ
ಚಾರದಿಂ ಹರಿದಳೆಂಬಾಗಳತಿದುಃಖಿಗುಂ
ಟೇ ಬುದ್ಧಿ ಜಗವಱಿಯಲು ॥ ೪೭

ಸಾರೆ ಬರೆ ಬಿಟ್ಟೋಡಿ ಹೋದ ಚೋರರ ಖಡ್ಗ
ಧಾರೆಯಿಂ ಬಸವಳಿದ ಹಸುಳೆಯಂ ತನ್ನಯ ಕು
ಮಾರನೆಂದೇ ಬಗೆದು ಕರೆಕರೆದು ತಲೆದಡವಿ
ತಡವರಿಸಿ ಮೆಯ್ಯಪ್ಗಱುಹನು ।
ಹಾರುತಿರೆ ಬಾ[1]ರಿ[1]ಸುವ ಬೊಂಬುಳಿಯ ಕೊಂಬುಗಳ
ಭೇರಿಗಳ ಬೊಬ್ಬೆಗಳ ಕಳಕಳದೊಳೆಱಿಸಿ ಬಂ
ಧಾರುತ್ತ ಹರಿತಂದ ಹಿರಿಯ ಹುಯ್ಯಲ ಭಟರು
ಕಂಡು ಪಿಡಿದರು ಸತಿಯನು ॥ ೪೮

ಎಲೆಲೆ ರಕ್ಕಸಿಯಾಗದಿರಳಿವಳು ನಾವಿಲ್ಲಿ
ಕೊಲಬೇಡವೀಯಂಗವೆರಸಿ ಕೊಂಡೊಯ್ದು ಭೂ
ತಲಪತಿಗೆ ಕೊಡುವೆವೆಂದಸುವಳಿದ ಹಸುಳೆಯಂ
ಹೊಱಿಸಲಾಗೊಸರ್ವ ರಕುತ ।
ತಲೆಯಿಂದ ಸುರಿದುಟ್ಟ ಸೀರೆ ತೊಪ್ಪನೆ ತೋಯೆ
ಲಲನೆಯಂ ಕಿತ್ತಲಗುಗಳ ನಡುವೆ ಹೆಡಗೈಯ
ಬಲಿದ ನೇಣಂ ಪಿಡಿದು ಜಡಿಜಡಿದು ನಡಸಿ ತಂ
ದರು ರಾಜಬೀದಿಯೊಳಗೆ ॥ ೪೯

1 ಜಿ (?)

ಎನ್ನನಿವರಾಡಿಸಿದಡೇನನ್ನಾಡುವೆನೆಂದು
ತನ್ನ ಮನದೊಳು ತಾನೆ ತಿಳಿದು ನಿಶ್ಚಯಿಸಿದಳು
ಮುನ್ನೇಗಳಾವಾವ ದುಃಖವುಂಟವನೆಯ್ದಿ
ಕಂಡೆನುಂಡೆನು ತಣಿದೆನು।
ಇನ್ನೇನ ಕಾಣಲಿರ್ದಪೆನರಸ ಕೇಳಿದಡೆ
ನಿನ್ನ ಮಗನಂ ಕೊಂದ ಪಾಪಿಯಾನೆಂದಾಡಿ
[1]ಯನ್ಯಾಯ[1]ದಿಂ ಸಾವೆನೆನುತ ಬರಲೋಲಗದ
ಗಜಬಜವನೇವೊಗಳ್ವೆನು ॥ ೫೦

ಅಲ್ಲಿ ನೋಡಿಲ್ಲಿ ನೋಡತ್ತ ಹರಿಯಿತ್ತ ಹರಿ
ಹಲ್ಲಣಿಸು ತುರಗಮಂ ಕೈದುಗೊಳ್ಳೂರಮನೆ
ಯೆಲ್ಲವಂ ಸೋದಿಸುವುದೂರ ದಾರಿಗಳಲ್ಲಿ
ಕಂಡಿರಾದಡೆ ಕಳ್ಳರ।
ಕೊಲ್ಲು ತಿವಿ [2]ತಿದಿ[2]ಯನುಗಿಯೆಂಬ ಕಳಕಳರವದ
ಘಲ್ಲಣೆಯ ಭಟರ ತಿಂತಿಣಿಯೊಳುಪ್ಪರಿಗೆ ಜಡಿ
ದಲ್ಲಾಡುವಂತೋಲಗಂಗೊಟ್ಟು ಕೋಪಾಗ್ನಿ
ರೂಪಾದ ಭೂಪನಿರಲು ॥ ೫೧

ಹಸುಳೆಯಂ ಕದ್ದು ಕೊಂಡೊಯ್ದು ನೋಯಿಸಿದ ರ
ಕ್ಕಸಿಯ ಹಿಡಿತಂದೆವವಧರಿಸೆನಲು ಕಂಡು ಶಂ
ಕಿಸುತ ನೀನಾರೆತ್ತಣವಳೇಕೆ ಕೊಂದೆ ಸುಕು
ಮಾರಕನನೆಂದರಸನು।
ಬೆಸಗೊಳಲು ದನುಜೆಯಲ್ಲಾಂ ಮನುಜೆಯಾನರ್ಥ
ವಿಷಯದಾಪೇಕ್ಷೆಯಿಂ ಕೊಂಡೊಯ್ದು ಕೊಂದೆನೀ
ಸಿಸುವ ನೀನೊಲಿದಂತೆ ಮಾಡೆನ್ನನೆಂದಳಾ
ರಾಣಿ ವಸುಧಾಧಿಪತಿಗೆ ॥ ೫೨

1 ಸನ್ಯಾಂಗ (ಕ.), ಸನ್ಯಂಗ (ಖ.ಗ.ಘ.); 2 ಕಿವಿ (ಗ.ಪ.)

ಹೆವಜಿದಿರು ತೆಕ್ಕದಿರು ಅಂಜದಿರು ಲೋಗರಿ
ಟ್ಟುದೊ ನಿನ್ನ ಕೃತಕವೋ ಹೇಳು ಧರ್ಮಾಧಿಕರ
ಣದವರಂ ಕರಸುವೆಂ ನುಡಿಸುವೆಂ ಕಾವೆನೆಂ
ಧವನಿಪಂ ಬೆಸಗೊಂಡಡೆ।
ಇದಕಿನ್ನು ಧರ್ಮಾಧಿಕರಣವೇಗುವುದು ಕೊಂ
ದುದು ದಿಟಂ ಸತ್ತ ಶಿಶು ಕೈಯಲಿದೆಯಿದಕೆ ತ
ಕ್ಕುದನೀಗ ಕಾಂಬುದೆಂದಾಡಿದಳು ಜೀವದಾ
ಸೆಯುನೇನುವಂ ಹಾರದೆ ॥ ೫೩

ಕೊಂದೆ ಕೊಂದೆಂ ಕೊಂದೆನೆಂದು ತನ್ನಿಂದ ತಾ
ನೆಂದಡಿನ್ನೇಕೆ ಲೋಕದ ಮಾತು ಕೊಂದರಂ
ಕೊಂದು ಕಳೆವುದೆ ಧರ್ಮ ಜಗವರ್ತಿಯಂ ಹೊತ್ತಿ
ಸೈಳೆಹೂಟಿಯಂ ಹೂಡಿಸು।
ಸಂದುಸಂದಂ ಕಡಿಸು ಕಿವಿಮೂಗನರಿ ಬಹಳ
ದಿಂದ ತಿವಿಯೆಂದೊಬ್ಬರೊಂದೊಂದನೆಂದುದಾ
ಮಂದಿ ತನತನಗೆ ನುಡಿಯುತ್ತಿರಲು ವೀರಬಾ
ಹುಕನ ಕರಸಿದನರಸನು ॥ ೫೪

ಭೂನುತ ಕುಮಾರನಂ ದಹಿಸಿ ದೂ[1]ವೆ[1]ಯ ಕೆಲದೊ
ಳೀ ನರಕಿ ವನಿತೆಯನನಾಮಿಕನ ಕಯ್ಯೊಳನು
ಮಾನವಿಲ್ಲದೆ ಕೊಲಿಸು ಹೋಗೆಂದು ವೀರಬಾ
ಹುಕನ ಕೈಯಲಿ ಕಳುಹಲು
ಏನೆಂದುದಂ ಮಾಳ್ಪೆನೆಂದು ಸುಡುಗಾಡನ
ತ್ಯಾನಂದದಿಂ ಕಾವ ಚಂ[2]ದು[2]ಗನ ಕೈಯೊಳೀ
ಹೀನವನಿತೆಯ ಕೊಲಿಸುವೆಂ ಬೇಗ ಕರೆಯೆನ
ಲ್ಕರರೆ ಭೂಪಂ ಬಂದನು ॥ ೫೫

---

1 ಹೆ (ಕ.ಖ.ಗ.); 2 ಡಿ (ಗ.ಪ.)

ವಸುಧಾಧಿಪತಿಯ ನೇಹದ ಮಗನ ಕೊಂದ ರ
ಕ್ಕಸಿಯಿವಳನಾ ರುದ್ರಭೂಮಿಯೊಳಗೆಯ್ದೆ ತ
ಪ್ಪಿಸದೆ ಕೊರಳಂ ಕೊಱೆದು ಬಿಸುಡೆಂದು ಬೆಸನ ಕೊಡ
ಲಡಸಿ ಮುಂದಲೆಯ ಪಿಡಿದು।
ಕುಸುಕಿ ಕೆಡೆಮೆಟ್ಟಿ ಕೈಗಳ ಸೇದಿ ಬೆಂಗೆ ಬಾ
ಗಿಸಿ ಬಿಗಿದು ಹೆಡಗಯ್ಯನೇಣಿಂದ ಹೊಡೆದು ದ
ಟ್ಟಿಸಿ ಪಾಪಿ ಹೊಲತಿ ನಡೆನಡೆಯೆಂದು ನಡಸಿ ತಂ
ದಂ ತನ್ನ ತವಗದೆಡೆಗೆ ॥ ೫೬

# ೯. ವಿಶ್ವೇಶ್ವರಸಾಕ್ಷಾತ್ಕಾರ

ಇಂದೆನ್ನ ಕುಲಜನೆನಿಸುವ ಹರಿಶ್ಚಂದ್ರನಂ
ಹೊಂದದ ಚತುರ್ದಶಜಗಂಗಳಿಱಿವಂತು ತರು
ಣೇಂದುಧರನಹ ವಿಶ್ವಪತಿ ಮೆಱೆವ ಸಂಭ್ರಮದ
ಸಡಗರವ ನೋಳ್ಪೆನೆಂದು।
ಕುಂದದುದ್ವರ್ಣೇಱಿ ನಿಂದಿರ್ದನೋ ಎನಿ
ಪ್ಪಂದದಿಂದುದಯಗಿರಿಶಿಖರಕ್ಕೆ ರಾಗದಿಂ
ಬಂದನಂಬುಜಮಿತ್ರನೆಂದೆನಿಪನಪವಿತ್ರ
ತಿಮಿರಪಟಲಾಮಿತ್ರನು ॥ ೧

ಹೆಡಗಯ್ಯ ಬಿಗಿದ ನೇಣಂ ಕೊಯ್ದು ಬಿಸುಟು ನಿಡು
ಢಡದಲ್ಲಿ ಮೂಡ ಮುಂತಾಗಿ ಕುಳ್ಳಿರಿಸಿ ಹಿಂ
ದಡವಲ್ಲಿ ಕುಸಿದು ನೀಡಡಿಯಿಟ್ಟು ನಿಂದು ಖ
ಡ್ಗವ ಸೆಳೆದು ಜಡಿದು ನೋಡಿ।
ಹೆಡತಲೆಗೆ ಮೋಹಿ ಕೈಯೆತ್ತಿ ಕಂಧರ ಹಱಿಯೆ
ಹೊಡೆಯಲನುವಾದೆನನುವಾದೆನ್ನನುವಾಗಾಗು
ಮುಡದಿ ನೆನೆ ನಿನ್ನ ದೈವವನು ಬಿಡದೆನ್ನೊಡೆಯ
ನಂ ಹರಸು ಹರಸೆಂದನು ॥ ೨

ಆ ಹೊಯ್ದನಾ ಹೊಯ್ದನೆಲೆಲೆ ಶಿವಶಿವ ಅಪ್ಪ
ದೇಹಿ ನೀನೇ ಶರಣು ರಕ್ಷಿಸೆಬಲೆಯನು ದು
ರ್ಮೋಹಿ ವಿಶ್ವಾಮಿತ್ರ ಪಾಪಿ ಇಸ್ಸ್ಸಾದಡಂ ಸತಿಯ
ಕೊಲೆಯಂ ನಿಲಿಸಲು।
ಹೋಹುದೇನೆಂದೆನ್ನೋವಿ ಬೇಡಿಕೊಳುತಂ ಸುರ
ವ್ಯೂಹಮಂಬರದಲ್ಲಿ ಹೂಮಳೆಗಳಂ ಪಿಡಿದು
ಮೋಹರಂಬೆತ್ತು ನೋಡುತ್ತಿರಲು ನಾರಿ ಹರ
ಕೆಗಳನೆವಧರಿಸೆಂದಳು ॥ ೩

ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿರ್ದ್ದಂ
ಜಲಿವೆರಸಿ ಗುರುವಸಿಷ್ಠಂಗೆಱಗಿ ಶಿವನ ನಿ
ರ್ಮಲರೂಪ ನೆನೆದು ಮೇಲಂ ತಿರುಗಿ ನೋಡಿ ಭೂ
ಚಂದ್ರಾರ್ಕತಾರಂಬರಂ।
ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ ಮಗಂ ಮುಕ್ತನಾಗಲಿ ಮಂತ್ರಿ ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾ
ಗಲಿ ಹರಕೆ ಹೊಡೆಯೆಂದಳು ॥ ೪

ಹರಕೆಯಂ ಕೇಳಿ ಹವ್ವನೆ ಹಾಱಿ ಬೆಱಗಾಗಿ
ಮುರವಟ್ಟು ನಿಂದು ಭಾಪುರೆ ವಿಧಿಯ ಮುಳಿಸೆ ಹೋ
ದಿರುಳೆನ್ನ ಸುತನ ದುರ್ಮರಣಮಂ ತೋಱಿ ಕೈ
ಯೊಡನೆ ಮತ್ತೀಗಳೆನ್ನ।
ವರಸತಿಯ ತಲೆಯನೆನ್ನೆನ್ನ ಕೈಯಾರೆ ಪಿಡಿ
ದರಿವಂತೆ ಮಾಡಿದೆಯಿದಕ್ಕೆ ನಾನೆನಿತು ಹೇ
ವರಿಸುವವನಲ್ಲ ಪತಿಯಾಜ್ಞೆಯುಳಿದಡೆ ಸಾಕೆ
ನುತ್ತ ಕೊಲಲನುವಾದನು ॥ ೫

ಮನದ ಶಂಕೆಯನುಳಿದು ಹೊಡೆಯಲನುವಾದ ಭೂ
ಪನ ಭಾವಮಂ ಕಂಡು 'ಹೊಡೆಯಬೇಡೆನ್ನ ನಂ
ದನೆಯರಂ ಮದುವೆಯಾದಡೆ ಸತ್ತ ಮಗನನೆ
ತ್ತುವೆನೀವಳ ತಲೆಗಾವೆನು।
ವಿನಯದಿಂ ಕೊಂಡ ಧನಮಂ ಕೊಟ್ಟು ನಿನ್ನ ಬಂ
ಧನಮೋಕ್ಷಮಂ ಮಾಡಿ ರಾಜ್ಯಮಂ ಪೊಗಿಸಿ ಮು
ನ್ನಿನ ಪರಿಯಳಿರಿಸುವೆಂ ಕೇಳೆಂದನಂಬರದೊ
ಳಿದ್ದು ವಿಶ್ವಾಮಿತ್ರನು ॥ ೬

ತಿರುಗಿ ಮೇಲಂ ನೋಡಿ ಕಂಡಿದೇಂ ಮುನಿ ನಿಮ್ಮ
ಹಿರಿಯತನಕೀ ಮಾತು ಯೋಗ್ಯವೇ ಕೇಳೆನ್ನ
ಸಿರಿಪೋದಡೇನು ರಾಜ್ಯಂ ಪೋದಡೇನು ನಾ
ನಾರ ಸಾರ್ದಡೇನು।
ವರಪುತ್ರನಸುವಳಿದು ಪೋದಡೇಂ ನಾನೆನ್ನ
ತರುಣಿಯಂ ಕೊಂದಡೇಂ ಕುಂದೆ ಸತ್ಯವನು ಬಿ
ಟ್ಟರಸೆನಿಸಿದಡೆ ಸಾಕು ಎಂದೆತ್ತಿ ಹಿಡಿದ ಖ
ಡ್ಗವ ಜಡಿಯುತಿಂತೆಂದನು ॥ ೭

ಎನ್ನ ದುಷ್ಕರ್ಮವಶದಿಂದಾದ ಕರ್ಮವೆಂ
ದೆನ್ನೆಗಂ ಬಗೆದೆನಾನಿಂದುತನಕಂ ಕಡೆಗೆ
ನಿನ್ನ ಗೊಡ್ಡಾಟವೇ ಹೊಲೆಯನಾದವನೆನ್ನ
ಸತಿಗಿತಿಯ ಕೊಲೆಗೆ ಹೇಸಿ।
ಬೆನ್ನೀವೆನೇ ಇದಂ ತೋಜು ಸಿಕ್ಕಿಸಬಂದ
ಗನ್ನಗತಕಕ್ಕೆ ಸೆಡೆವೆನೆ ಸಡಿಫಡೆನುತ್ತಾರ್ದು
ನನ್ನಿಕಾಜಂ ವಧುವನೆಲೆಲೆ ಶಿವಶಿವ ಮಹಾ
ದೇವ ಹೊಡೆದಂ ಹೊಡೆದನು ॥ ೮

ಹೊಡೆದ ಕಡುಗದ ಬಾಯುಕಡೆಯ ಹೊಡೆಗಳಸ್ಸಾಂತು
ಮಡದಿಯುಡೆಗೊರಳ ನಡುವಡಸಿ ಮೂಡಿದನು ಕೆಂ
ಜಡೆಯ ಶಶಿಕಳೆಯ ಸುರನದಿಯ ಬಿಸಿಗಣ್ಣ ಫಣಿ
ಕುಂಡಲದ ಪಂಚಮುಖದ।
ಎಡದ ಗಿರಿಜೆಯ ತಳಿತ ದಶಭುಜದ ಪುಲಿದೊಗಲಿ
ನುಡಿಗೆಯ ಮಹಾವಿಷ್ಣುನಯನಪೂಜಿಸಿದ ಮೆ
ಲ್ಲಡಿಯ ಕಾಶೀರಮಣ ವಿಶ್ವನಾಥಂ ಸುರರ
ನೆರವಿ ಜಯಜಯವೆನುತಿರೆ ॥೯

ಮುರಹರಂ ಬಂದನಬ್ಜಾಸನಂ ಬಂದನಮ
ರರ ವರಂ ಬಂದನಗಜಾಪಿತಂ ಬಂದನೀ
ಶ್ವರಸುತಂ ಬಂದನೀರಾಱು ರವಿಗಳು ಬಂದ
ರಿಕ್ಷುಕೋದಂಡ ಬಂದ।
ಸುರುಚಿರ ನವಗ್ರಹಂಗಳು ಬಂದವೆಯ್ದೆ ನವ
ಸರದೊಳಿವರಿವರೆನ್ನಲೇಕಿನ್ನು ಸರ್ವದೇ
ವರು ಬಂದರಪ್ರತಿಮದೇವಾಧಿದೇವ ಪಂ
ಪಾವಿರೂಪಾಕ್ಷನೆಡೆಗೆ ॥೧೦

ಕುಡಿದೌಷಧಂ ಬಾಯ್ಗೆ ನಿಗ್ರಹಂ ಮಾಡಿ ತಾ
ಳ್ದೊಡಲಿಂಗೆ ಸುಖವನೀವಂತೆ ಲೋಕದ ಕಣ್ಗೆ
ಕಡುಮುಳಿದರಂತೆ ತೋಱಿಸಿ ಸತ್ಯಶುದ್ಧನ
ಪ್ಪನ್ನೆಗಂ ಕಾಡಿ ನೋಡಿ।
ಕಡೆಯೊಳು ಹರಿಶ್ಚಂದ್ರರಾಯಂಗೆ ಗಣವೆರಸಿ
ಮೃಡನನೆಳತಂದಿತ್ತು ಕೀರ್ತಿಯಂ ಮೂಜಗದ
ಕಡೆಗೆ ಹರಹಿದ ಮುನಿವರೇಣ್ಯ ವಿಶ್ವಾಮಿತ್ರ
ಬಂದನು ವಸಿಷ್ಠ ಸಹಿತ ॥೧೧

ನೆನೆದು ಚಾಂಡಾಲಕಿಂಕರನಾಗಿ ಹೊಲೆವೇಷ
ವನು ಹೊತ್ತು ಸುಡುಗಾಡ ಕಾದು ಶವಶಿರದಕ್ಕಿ
ಯನು ಹೇಸದುಂಡು ಜೀವಿಸುವ ವರಪುತ್ರನಳಿ
ದುದನು ಕಣ್ಣಾರೆ ಕಂಡು।
ಘನಪತಿವ್ರತೆಯಪ್ಪ ನಿಜಸತಿಯು ಕೊಂದ ನೀ
ಚನು ಮೂರ್ಖನೆನ್ನೆನ್ನ ಠಾವಿಂಗದೇಕೆ ಪಾ
ವನಮೂರ್ತಿ ನೀವು ಬಿಜಯಂಗೆಯ್ದಿರೆಂದಭವ
ನಂಘ್ರಿಯಲಿ ಸೈಗೆಡೆದನು ॥೧೨

ಘನ ಸತ್ಯವೇ ಜೀವನೆಂದಿರ್ದ ನಿನ್ನ ಹೊಲೆ
ಯನ ಸೇವೆ ಗುರುಸೇವೆ ಹೊತ್ತ ಹೊಲೆವೇಷ ಪಾ
ವನಪುಣ್ಯವೇಷ ಸುಡುಗಾಡ ರಕ್ಷಿಸುತಿರವು
ತಾ ಯಜ್ಞರಕ್ಷೆಯಿರವು।
ಅನುದಿನಂ ಭುಂಜಿಸಿ[1]ದ[1] ಶವದ ಶಿರದಕ್ಕಿಯು
ಪ್ರಿನ[2]ಪೇಯ[2]ಚಾಂಡಾ ಯಣಂ ಪುತ್ರನಳಿವು ಜ
ನ್ಮನಿಕಾಯದಳಿವಂಗನೆಯಹನನ ಮಾಯಾಹ
ನನವಂಜಬೇಡೆಂದನು ॥೧೩

ಏಳು ಭೂರಮಣ ಎಂದಭವ ಪರಸುತ್ತ ಕ
ಣ್ಣಾಲಿಜಲವಂ ತೊಡೆದು ಸಂತೈಸಿ ಭಸಿತಮಂ
ಫಾಳದೊಳಗಿಟ್ಟು ತೆಗೆದಪ್ಪಿ ಕೌಶಿಕನ ಕರೆ
ದೆಲೆ ಮುನಿಪ ಸುಕುಮಾರನ।
ತೋಳ ಹಿಡಿದೆತ್ತಿ ತಾ ಬೇಗೆಂದೆನಲ್ಕೆ ಮುನಿ
ಪಾಳಕಂ ವಿಷವೇಱಿ ಸತ್ತಿರ್ದ ಪುತ್ರನಂ
ಏಳೇಳು ಲೋಹಿತಾಶ್ವಾಂಕ ಎನೆ ಬೆಬ್ಬಳಿಸು
ತೆದ್ದನೇವಣ್ಣಿಸುವೆನು ॥೧೪

---

1 ತು (?); 2 ಪತ್ಯ (?)

ಅತಿ ಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನು
ನ್ನತಯತಿವರನು ಹುಸಿದು ಮಾಡುವ ಮಹಾಯಜ್ಞ
ಶತವನೆಯ್ದೆ ಪಂಚಪಾತಕ ಸತ್ಯವೆರಸಿದ
ನ್ಯಾಯವದು ಲಿಂಗಾರ್ಚನೆ
ಶ್ರುತಿಮತವಿದೆನ್ನಾಜ್ಞೆ ನಿನ್ನಂತೆ ಸತ್ಯರೇ
ಕ್ಷಿತಿಯೊಳಿನ್ನಾರುಂಟು ಹೇಳೆಂದು ಪಾರ್ವತೀ
ಪತಿ ಹರಿಶ್ಚಂದ್ರನಂ ತಲೆದಡವಿ ಬೋಳೈಸಿ
ಕೌಶಿಕಂಗಿಂತೆಂದನು ॥ ೧೫

ನುಡಿಯೊಳನೃತಂ ತೋಱದಂತೆ ನಿನ್ನಲಿಗೆ ನಿಂ
ದಡೆ ಮೆಚ್ಚಿ ಮೇಲೇನ ಕೊಡುವೆನೆಂದೆಂದೆಯದ
ಕೊಡು ಬೇಗದಿಂದ ವಿಶ್ವಾಮಿತ್ರ ಎಂದಡಾ
ನೈವತ್ತು ಕೋಟಿ ವರುಷ ।
ಬಿಡದೆ ಮಾಡಿದ ತಪಃಫಲದೊಳರ್ಧವನಾಂತಿ
ಕಡುಮುಳಿದು ಕಾಡಿ ನೋಡಿದೆನು ಮೆಚ್ಚಿದೆನಿನ್ನು
ಹಿಡಿಯೆಂದುಸಿರ್ದ ಫಲವೆಲ್ಲವಂ ಕೊಟ್ಟನರ
ಸಂಗೆ ಮುನಿಗಳ ದೇವನು ॥ ೧೬

ಪೊಡವಿಯೊಡೆತನದ ಪಟ್ಟವನಯೋಧ್ಯಾಪುರದ
ನಡುವೆ ಕಟ್ಟುವೆನೇೞು ನಡೆ ರಥವನೇಱೆಂದು
ನೃಪಸಮಕ್ಷದೊಳು ಕೌಶಿಕನೆನಲು ಕಡೆತನಕ
[illegible]ನ್ನುಂ ಜೀವಿತವ ಕೊಂಡೆನು ।
ಒಡೆಯನುಳ್ಳವನಾನು ಬರಬಾರದಯ್ಯ ನಿ
ಮ್ಮಡಿಗಳಿಗೆ ದಾನವಾಗಿತ್ತ ವಸುಮತಿಯತ್ತ
ಲಿಡಿಯನಿಡುವವನಲ್ಲ ಬೆಸಸಬೇಡದನೆಂದು
ಭೂನಾಥ ಕೈಮುಗಿದನು ॥ ೧೭

ಆನೇಕೆ ರಾಜ್ಯವೇಕೆಲೆ ಜನಪ ಸತ್ಯಸಂ
ಧಾನನಂ ನೋಡಲೆಂದುಳ್ಳುದೆಲ್ಲವ ಕೊಂಡ
ಡೇನೆಂಬನೋ ಎಂದು ಕಾಡಿ ನೋಡಿದೆನೈಸೆ
ಸರ್ವರಾಜ್ಯಂ ನಿನ್ನದು।
ಕೀನಾಶನಂ ಕರೆದು ವೀರಬಾಹುಕನಾಗಿ
ಭೂನಾಥನಂ ನಿಲಿಸಿ ಬೇಡಿದರ್ಥವ ಕೊಟ್ಟು
ನೀನೆ ತಱುಬೆಂದು ಕಳುಹಿದೆನೈಸೆ ಕೃತಕವ
ಲ್ಲೆಂದು ನಂಬುಗೆಯಿತ್ತನು ॥ ೧೮

ಪ್ರೌಢವಿಪನ ವಾಕ್ಯದೊಳು ಹುಸಿಯ ನೀಂ ಪಿಡಿದೆಯಾ
ದಡೆ ನಾನು ಮುನಿತನವನುಳಿದು ನರಶಿರದೋಡ
ಹಿಡಿದು ಮದ್ಯಪಿಯಾಗಿ ತೆಂಕಮುಖವಹೆನೆಂದು
ದೇವಸಭೆಯೊಳಗೆ ನಾನು।
ನುಡಿದು ಭಾಷೆಯನಿತ್ತೆ ನೀನೆನ್ನ ಭಾಷೆಯಂ
ನಡಸಿ ರಕ್ಷಿಸಿದೆ ಸತ್ಯವ ಮೆಱೆದೆಯೆಂದು ತಲೆ
ದಡವಿ ತನ್ನಂ ಕೊಟ್ಟನೀಶನ ಸಮಕ್ಷದೊಳು
ವಾಸಿಷ್ಠನವನಿಪತಿಗೆ ॥ ೧೯

ಕರುಣದಿಂ ಧರ್ಮಾರ್ಥಕಾಮಮೋಕ್ಷಂಗಳಂ
ಸುರಿದು ನಿನ್ನಯ ಪುಣ್ಯಕಥೆ ಸರ್ವಲೋಕದೊಳ
ಗಿರಲಿಯೆಂದಭವನಿಂ ಬೇಕಾದ ವರವ ನೀಂ
ಬೇಡು ಭೂಪಾಲ ಎನಲು।
ಹರೆಯದೀ ಕಾಶಿಯೊಳು ನಿನ್ನ ಮಂದಿರದ ಮೇ
ಲೆರಡು ಯೋಜನದೊಳೆನ್ನಯ ಕೀರ್ತಿಪುರ ಹೇಮ
ವಿರಚಿತದೊಳಿರಬೇಹುದೆಂದು ಬೇಡಿದಡದಂ
ಕೊಟ್ಟನಂದಗಜೇಶನು ॥ ೨೦

ಹರನ ಸಭೆಯೊಳಗೆ ಮುರಹರನ ಸಭೆಯೊಳಗೆ ವಾ
ಗ್ವರನ ಸಭೆಯೊಳಗೆ ಪವಿಧರನ ಸಭೆಯೊಳಗೆ ದಿನ
ಕರನ ಸಭೆಯೊಳಗೆ ಭಾಸುರಶಿಖಿಯ ಸಭೆಯೊಳಗೆ
ಶಶಿಯೊಂದು ಸಭೆಯ ನಡುವೆ ।
ಪರಮ ಮುನಿಸಭೆಯೊಳಗೆ ವರನೃಪರ ಸಭೆಯೊಳಗೆ ।
ಧರಣಿಪನ ಕಥನವೇ ಕಥನ ಮಾತೇ ಮಾತು
ಪರವಿಲ್ಲ ಬೇಱನ್ಯವಾರ್ತೆಗಳು ಹುಗಲಿಲ್ಲ
ವೆಂಬಾಗಳೇವೊಗಳ್ವೆನು ॥ ೨೧

ಧರೆಯೊಳು ಹರಿಶ್ಚಂದ್ರಚಾರಿತ್ರಮಂ ಕೇಳ್ದ
ನರರೇಳು ಜನ್ಮದಿಂ ಮಾಡಿರ್ದ ಪಾತಕವು
ತರಣಿಯುದಯದ ಮುಂದೆ ನಿಂದ ತಿಮಿರದ ತೆಱದೆ
ಹರೆಯುತಿಹುದೇಕೆಂದಡೆ ।
ಹರನೆಂಬುದೇ ಸತ್ಯ ಸತ್ಯವೆಂಬುದು ಹರನು
ಎರಡಿಲ್ಲವೆಂದು ಶ್ರುತಿ ಸಾಱುತಿರಲಾ ವಾಕ್ಯ
ವರರೆ ನಿರುತವ ಮಾಡಿ ಮೂಜಗಕೆ ತೋಱಿದ ಹ
ರಿಶ್ಚಂದ್ರಕಥೆಗೇಳ್ದಡೆ ॥ ೨೨

ಅನೃತವಱಿಯದ ಹೊಲೆಯನಂ ಸೆನೆಯೆ ಪುಣ್ಯವೆಂ
ದೆನೆ ಸೂರ್ಯಕುಲಜ ಕಲಿ ದಾನಿ ಸತ್ಯಂ ವಸಿ
ಷ್ಠನ ಶಿಷ್ಯನಧಿಕಶೈವಂ ಕಾಶಿಯೊಳ್ ಮೆಱೆದ
ವೇದಪ್ರಮಾಣಪುರುಷ ।
ಘನನೃಪ ಹರಿಶ್ಚಂದ್ರನೆಂದಡಾತನ ಪೊಗಳ್ದು
ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ವ
ನನಪೇಕ್ಷೆಯಿಂದ ಕವಿ ರಾಘವಾಂಕಂ ಮಹಾ
ಲಿಂಗಭಕ್ತರ ಭಕ್ತನು ॥ ೨೩

# ಶಬ್ದಕೋಶ

## ಅ

| | | |
|---|---|---|
| ಅಕ್ಕಜ | ೫-೪೧ | ಪ್ರೀತಿ |
| ಅಕ್ಕಾಡು | ೬-೯ | ತುಳುಕಾಡು |
| ಅಕ್ಕಿಸು | ೪-೨೯ | ಹಿಂದೆಗೆ (?) |
| ಅಗಡು | ೮-೨ | ತುಂಟು |
| ಅಗಿ | ೮-೧೩ | ಕಚ್ಚು |
| ಅಗುರ್ವಿಸು | ೮-೧೮ | ಭಯಪಡಿಸು |
| ಅಗ್ಗ | ೧-೧೧ | ಸಂ.-ಅರ್ಘ; ಶ್ರೇಷ್ಠ |
| ಅಗ್ಗಳಿಸು | ೨-೧೦ | ಹೆಚ್ಚು, ದೊಡ್ಡದು ಮಾಡು |
| ಅಟ್ಟುಳಿ | ೭-೪೪ | ತೊಂದರೆ |
| ಅಟ್ಟೆ | ೮-ರಗಳೆ | ತಲೆಯಿಲ್ಲದ ದೇಹ |
| ಅಡಕ | ೭-೧೮ | ದಟ್ಟ, ಆಧಿಕ್ಯ |
| ಅಡಗು | ೪-೫ | ಮಾಂಸ |
| ಅಡಪು | ೭-೧೯ | ಅಡವು, ಆಶ್ರಯ |
| ಅಡಸು | ೩-೨೫<br>೪-೧೦ | ಮೇಲೆ ಬೀಳು, ಅಡಚು, ಚಾಚು |
| ಅಡುಗಬ್ಬು | ೮-೫ | ಕಟ್ಟಿಗೆ, ಸೌದೆ |
| ಅಣಕ | ೨-೧೬ | ಹಾಸ್ಯ, ನಿಂದೆ, ಕುಚೋದ್ಯ |
| ಅಣಲ್ | ೫-೮ | ದವಡೆ |
| ಅಣಿಮಾ | ೩-೨೮ | ಯೋಗಸಾಧನೆಯಿಂದ ದೊರೆಯುವ ಅಷ್ಟಸಿದ್ಧಿಗಳಲ್ಲಿ ಒಂದು |
| ಅದಟ | ೧-೧೦ | ಪರಾಕ್ರಮಶಾಲಿ |
| ಅದಟು | ೧-೧೨ | ಪರಾಕ್ರಮ |
| ಅದ್ದು | ೭-೩೮ | ಮುಳುಗು |
| ಅನಾಮಿಕ | ೪-೩೫ | ಹೊಲೆಯ |
| ಅನು | ೩-೩೫<br>೭-೪೬<br>೩-೨ | ರೀತಿ |

| | | |
|---|---|---|
| ಅನುಗೊಡು | ೬-೨೪ | ಅವಕಾಶಕೊಡು |
| ಅನುವಾಗು | ೪-೧ | ಸಿದ್ಧವಾಗು |
| ಅನ್ವಯ | ೬-೨೧ | ವಂಶ |
| ಅಪ್ಪಯಿಸು | ೬-೨೧ | ಒಪ್ಪಿಸು |
| ಅಮ್ಮಾವು (?) | ೩-೧೧ | ಕಾಡುಹಂದಿ (?) [ಕಬ್ಬಿಗರ ಕಾವ, ಪ. ೧೭೩ ನೋಡಿ] |
| ಅರಳ್ | ೧-೯ | ಹೂವು |
| ಅರಳ ಸರಳ | ೪-೧೦ | ಕಾಮದೇವ |
| ಅರಿ | ೫-೯<br>೮-೭ | ಕತ್ತರಿಸು |
| ಅರಿದು | ೨-೪ | ಅಸಾಧ್ಯ |
| ಅರುಣಾಂಬು | ೮-೨೦ | ರಕ್ತ |
| ಅಱತ | ೫-೫ | ಬತ್ತಿದ |
| ಅಱತು | ೨-೧೩ | ಒಣಗಿ, ಆರಿಹೋಗಿ |
| ಅಱಸು | ೪-೩ | ಹುಡುಕು |
| ಅಱೆಯಟ್ಟು | ೪-೩ | ವೇಗವಾಗಿ ಹಿಂಬಾಲಿಸು |
| ಅಱೆವಳೆ | ೫-೨ | ಬಿರುಮಳೆ, ಚಚ್ಚುವ ಮಳೆ |
| ಅಲಗು | ೩-೨೯ | ಕತ್ತಿ |
| ಅಲಸು | ೫-೨೪<br>೭-೪೫ | ಹಿಂದೆಗೆ |
| ಅಲೆ | ೯-೧೬ | ಪೀಡೆ |
| ಅವಗಾಹ | ೭-೧೩ | ಸ್ನಾನ |
| ಅವತಂಸ | ೫-೧೮ | ಆಭರಣ |
| ಅವಧಿ | ೭-೨೦ | ಗಡುವು |
| ಅಸವಸ | ೭-೪೫ | ತ್ವರೆ, ಅವಿಚಾರ |
| ಅಸವಳಿ | ೬-೧೮ | ದಿಕ್ಕುಕೆಡು |
| ಅಸಿ | ೬-೧೫ | ಕತ್ತಿ |
| ಅಸು | ೫-೩ | ಪ್ರಾಣ |
| ಅಹಗೆ | ೪-೪೩ | ಹಾಗೆ |
| ಅಳಲ್ | ೪-೫ | ವ್ಯಥೆ |
| ಅಳಲಿಸು | ೭-೪೦ | ವ್ಯಥೆಪಡಿಸು |
| ಅಳವಟ್ಟು | ೮-೬ | ರಮ್ಯವಾಗಿ |
| ಅಳವಡಿಸಿ | ೮-೧೪ | ತಾಳಿಕೊಂಡು |
| ಅಳವಿ | ೪-೧೧ | ಅಳತೆ (ಇಲ್ಲಿ, ಸಮೀಪ) |

| | | |
|---|---|---|
| ಅಳವು | ೩-೮ | ಸಾಮರ್ಥ್ಯ |
| ಅಳಿ | ೭-೩೭ | ನಾಶವಾಗು |
| ಅಳುಕು | ೭-೪೪ | ಭಯಪಡು |
| ಅಳುಪು | ೭-೪೭<br>೫-೨೫ | ಆಶೆಪಡು |
| ಅಳ್ಳಿಱು | ೬-೧<br>೬-೧೪ | ಭೇದಿಸಿಕೊಂಡು ಹೋಗು |
| ಅಳ್ಳೆ | ೪-೩ | ಪಕ್ಕೆ |
| ಅಂಚಲ | ೩-೩೨ | ಬಟ್ಟೆಯ ಸೆರಗು |
| ಅಂಜುಳಿ | ೯-೪ | ಬೊಗಸೆ |
| ಅಂಡಲೆ | ೩-೧೩ | ತೊಂದರೆ, ಹಿಂಸೆ, ಪೀಡೆ |
| ಅಂತಸ್ಥ | ೩-೧ | ಮನಸ್ಸು |
| ,, | ೩-೨ | ಒಳಗುಟ್ಟು |
| ಅಂಬರ | ೫-೨೫ | ೧. ಆಕಾಶ, ೨. ಬಟ್ಟೆ |
| ಅಂಬು | ೪-೧೧ | ಬಾಣ |

## ಆ

| | | |
|---|---|---|
| ಆಜ್ಯ | ೪-೩೦ | ತುಪ್ಪ |
| ಆಡಿತು | ೨-೨೧ | ಆಡಿದುದು |
| ಆಣೆ | ೮-೩೦ | ಸಂ.-ಆಜ್ಞೆ |
| ಆತುರ | ೪-೪೨ | ಔತ್ಕಂಠ್ಯ |
| ಆಂತ | ೧-೧೫ | ಪ್ರತಿಭಟಿಸಿದ |
| ಆಮ್ರ (ಆಮ್ಲ ?) | ೪-೪೧ | ಹುಳಿ |
| ಆಯತಿ | ೮-೪೩ | ವಿಸ್ತಾರ, ಹವಣು |
| ಆರಯ್ | ೪-೯<br>೪-೧೯ | ಪರೀಕ್ಷಿಸು |
| ಆರಯ್ಕೆ | ೮-೪ | ವಿಚಾರ, ಯೋಚನೆ |
| ಆರಾತಿ | ೧-೧೨ | ಶತ್ರು (ಸಂ.-ಅರಾತಿ) |
| ಆರು | ೮-೪೮ | ಗಟ್ಟಿಯಾಗಿ ಕೂಗು |
| ಆರ್ತ | ೫-೨೭<br>೮-೨೩ | ಅಭಿಲಾಷೆ |
| ಆಱು | ೨-೧೭ | ಸಮರ್ಥನಾಗು |
| ,, | ೨-೧೮ | ಬತ್ತು, ಇಲ್ಲದಂತೆ ಆಗು |

| | | |
|---|---|---|
| ಆಱುಸು | ೪-೫ | ಶಾಂತಮಾಡು |
| ಆಲಿ | ೩-೧೪ | ಕಣ್ಣುಗುಡ್ಡೆ |
| ಆಲಿಸು | ೫-೩೨ | ಕೇಳು |
| ಆವು | ೩-೧೦ | ದನ |
| ಆಶೆ | ೧-೯ | ದಿಕ್ಕು |
| ಆಸಱು | ೩-೧೨ | ಬಳಲಿಕೆ |
| ಆಸುರ | ೩-೧೨ | ಅತಿಶಯ |
| ಆಳ್ | ೩-೧೮<br>೪-೩೧ | ಮುಳುಗು |

## ಇ

| | | |
|---|---|---|
| ಇಕ್ಕು | ೮-೧೯ | ಹ.ಗ.-ಇರ್ಕುಂ ; ಇರುವುದು |
| ಇಕ್ಷು | ೯-೧೦ | ಕಬ್ಬು |
| ಇಡುಕುಱು | ೬-೨<br>೭-೪ | ಒತ್ತು |
| ಇದ್ದೆಸೆ | ೪-೯ | ಎರಡು ತುದಿ |
| ಇನ | ೩-೨೭ | ಸೂರ್ಯ |
| ಇಱುಹೆ | ೩-೨೦ | ಇರುವೆ |

## ಈ

| | | |
|---|---|---|
| ಈಡಾಡು | ೨-೧೭ | ಚಲ್ಲಾಡು, ಬಿಸುಡು |
| ಈರಾಱು | ೯-೧೦ | ಹನ್ನೆರಡು |
| ಈರೇಳ್ | ೨-೧೪ | ಹದಿನಾಲ್ಕು |
| ಈಂಟು | ೭-೪೨ | ಕುಡಿ |

## ಉ

| | | |
|---|---|---|
| ಉಗ್ಗಡ | ೩-೨೮ | ಘೋಷ |
| ಉಗಿ | ೪-೫ | ಸೆಳೆ, ಸುಲಿ |
| ಉಗು | ೮-೫ | ಸುರಿ |
| ಉಡಿ | ೮-೧೦ | ಮುರಿ |
| ಉಡುಗೊಱೆ | ೭-೪೭ | ಮರ್ಯಾದೆ |
| ಉತ್ತರಿಸು | ೫-೭<br>೭-೧ | ದಾಟು, ಕಡೆಹಾಯಿ, ನಡಸು |

| | | |
|---|---|---|
| ಉಬ್ಬರ | ೫-೧೧, ೫-೩೭ | ಆಧಿಕ್ಯ |
| ಉಭಯಕವಿ | ೧-೩ | ಎರಡು ಭಾಷೆಗಳಲ್ಲಿ ಎಂದರೆ ಸಂಸ್ಕೃತ ಕನ್ನಡಗಳಲ್ಲಿ ಕವಿ |
| ಉಮ್ಮಳಿಕೆ | ೪-೩೫ | ಉದ್ವೇಗ, ಚಿಂತೆ |
| ಉರವಣಿಸಿ | ೪-೭, ೭-೧೧ | ವೇಗವಾಗಿ, ತೀವ್ರವಾಗಿ |
| ಉರವಣೆ | ೩-೨೫ | ಆಧಿಕ್ಯ |
| ಉರ್ಚು | ೪-೧೦ | ಚುಚ್ಚು |
| ಉರ್ವಿ | ೨-೨ | ಭೂಮಿ |
| ಉಱುವ | ೮-೩೬ | ಶ್ರೇಷ್ಠ, ಯೋಗ್ಯ |
| ಉಱೆ | ೩-೨ | ಹೆಚ್ಚಾಗಿ |
| ಉಲಿ | ೪-೨ | ಕೂಗು |
| ಉಲಿಹ | ೪-೩೬ | ಕೂಗು |
| ಉಲುಕು | ೮-೨೦ | ಅದಿರುವುದು |
| ಉಸಿರ್ | ೯-೧೬ | ಹೇಳು |

## ಎ

| | | |
|---|---|---|
| ಎಕ್ಕಲ | ೩-೨೦ | ಕಾಡುಹಂದಿ |
| ಎಕ್ಕಟಿ | ೬-೨೨ | ಏಕಾಂತವಾಗಿ |
| ಎಕ್ಕೆ | ೧-೧೪ | ಸಮ |
| ,, | ೭-೪೨ | ಸಮೂಹ |
| ಎಡರು | ೪-೩೨ | ಕಷ್ಟ |
| ಎಡೆ | ೨-೧೨ | ಮಧ್ಯ |
| ಎಡೆಗೆಯ್ | ೬-೨೪ | ಅವಕಾಶಕೊಡು |
| ಎಡೆಗೊಳ್ | ೧-೫, ೨-೨ | ಉಂಟಾಗು, ಸೇರು |
| ಎಡೆವಾಯ್ದು | ೧-೫ | ಅಪ್ಪಿತಪ್ಪಿ |
| ಎತ್ತು | ೨-೧೩ | ದೂಷಿಸು |
| ಎಯ್ದೆ | ೪-೯ | ಚೆನ್ನಾಗಿ |
| ಎರಳೆ | ೩-೨೦ | ಜಿಂಕೆ |
| ಎರೆ | ೬-೧೭ | ಯಾಚಿಸು |
| ಎಱಗು | ೫-೨ | ಮೇಲೆ ಬೀಳು |

| | | |
|---|---|---|
| ಎಲರ್ | ೪-೧೪ | ಗಾಳಿ |
| ಎವೆ | ೩-೨೨ | ರೆಪ್ಪೆ |
| ಎಸಕ | ೨-೪ | ಕೆಲಸ |
| ಎಳತಟ | ೩-೮ | ಎಳೆದಾಟ |
| ಎಳಲು | ೪-೪೫ | ನೇತಾಡು |
| ಎಳಸು | ೩-೩೨, ೪-೩೫ | ಅಪೇಕ್ಷಿಸು |
| ಎಳೆಹೂಟಿ | ೫-೯, ೮-೫೪ | ಉಳುಮೆಯಲ್ಲಿ ಉಪಯೋಗಿಸುವ 'ಹೂಟಿ' |

## ಏ

| | | |
|---|---|---|
| ಏಗು | ೮-೧೦ | ಬೇಯು |
| ಏಗುವವು | ೨-೧೯ | ಏನುಮಾಡಬಲ್ಲುವು |
| ಏಱು | ೪-೨೪ | ಗಾಯ |
| ಏವೆನ್ | ೪-೧೭ | ಏನುಮಾಡಲಿ |

## ಐ

| | | |
|---|---|---|
| ಐದನೆ | ೪-೨೬ | ಇದ್ದಾನೆ |
| ಐದೆದಾಳಿ | ೮-೨೯ | ಸುಮಂಗಲಿಯ ತಾಳಿ |
| ಐಸಲೆ | ೪-೪೦ | ಅಲ್ಲವೇ, ಅಷ್ಟೇ |

## ಒ

| | | |
|---|---|---|
| ಒಕ್ಕಲಿಕ್ಕು | ೪-೨ | ಧ್ವಂಸಮಾಡು |
| ಒಗಡಿಸು | ೫-೨೪, ೭-೩೬ | ಅಸಹ್ಯಪಡು |
| ಒಗೆ | ೩-೩೪ | ಹುಟ್ಟು, ಉಂಟಾಗು |
| ಒಗ್ಗು | ೬-೨ | ಗುಂಪು, ಸಮೂಹ |
| ಒಟ್ಟಜೆ | ೮-೪೩ | ಅತಿಶಯ (ಇಲ್ಲಿ, ಪರಾಕ್ರಮ) |
| ಒತ್ತರಿಸು | ೭-೧೬ | ಒಂದು ಕಡೆಗೆ ಒತ್ತು |
| ಒದವಿಸು | ೩-೨೫ | ಉಂಟುಮಾಡು |
| ಒಯ್ಯನೆ | ೧-೬ | ಸಾವಕಾಶವಾಗಿ |
| ಒರೆದೊರೆ | ೧-೧೪ | ಸಮಾನ |

| | | |
|---|---|---|
| ಒಱಗು | ೫-೪ | ಮಲಗು, ಬಾಗು |
| ಒಱತೆ | ೮-೧೦ | ಸ್ರವಿಸು, ಉಕ್ಕು |
| ಒಱತೆಗಟ್ಟು | ೬-೪೫ | ಎದುರುಬೀಳು |
| ಒಸರ್ | ೮-೧೮ | ಸ್ರವಿಸು |
| ಒಸೆ | ೧-೪<br>೨-೧೨ | ಪ್ರೀತಿಸು, ಪ್ರಸನ್ನವಾಗು |
| ಒಂದು | ೪-೧೨ | ಸೇರು |

## ಓ

| | | |
|---|---|---|
| ಓ | ೪-೪೨ | ಪ್ರೀತಿಸು |
| ಓಜೆ | ೮-೪೬ | ಕ್ರಮ (ಇಲ್ಲಿ, ವಿವೇಚನೆ) |
| ಓಡು | ೯-೧೯ | ತಲೆಬುರುಡೆ |
| ಓರಗೆ | ೮-೫<br>೧-೧೪ | ಸಮಾನ |
| ಓರಂತೆ | ೪-೪೬ | ಚೆನ್ನಾಗಿ |
| ಓಲೈಸು | ೫-೩೨ | ಸೇವಿಸು |
| ಓವು | ೨-೫<br>೩-೫ | ಪ್ರೀತಿಸು |

## ಔ

| | | |
|---|---|---|
| ಔರ್ವಾನಲ | ೧-೧೩ | ಸಮುದ್ರದಲ್ಲಿ ಅಡಗಿರುವ ಬೆಂಕಿ |

## ಕ

| | | |
|---|---|---|
| ಕಕ್ಕುಲಿತೆ | ೫-೪೧ | ಸಂದೇಹ |
| ಕಗ್ಗನೆ | ೪-೨೬ | ಕಪ್ಪನೆ |
| ಕಟಕ | ೩-೩೯ | ರಾಜಧಾನಿ |
| ಕಟವಾಯಿ | ೩-೨೦ | ಬಾಯಿಯ ಕೊನೆಯ ಭಾಗ |
| ಕಟ್ಟುಱಿಗಂಡ | ೬-೧೪ | ಕಟರೆಯಾಗುವವರೆಗೂ ಬಿಡದ |
| ಕಡಗು | ೩-೧೮ | ಉತ್ಸಾಹಗೊಳ್ಳು |
| ಕಡವರ | ೪-೩೧ | ಚಿನ್ನ, ನಿಧಿ |
| ಕಡವೆ | ೩-೧೫ | ಒಂದು ಮೃಗ |

| | | |
|---|---|---|
| ಕಡುಕೈ | ೪-೫ | ಸಾಮರ್ಥ್ಯವನ್ನು ತೋರು |
| ಕಡುಪು | ೮-೨೫ | ತೀವ್ರತೆ |
| ಕಡೆಗಣಿಸು | ೫-೨೮<br>೪-೨೩ | ತಾತ್ಸಾರಮಾಡು |
| ಕಡ್ಡಣಿಗೆ | ೭-೩೧ | ಜಡೆ |
| ಕದಪು | ೩-೩೪ | ಕೆನ್ನೆ |
| ಕದಂಬ | ೫-೧೭ | ಸಮೂಹ |
| ಕದುಕು | ೮-೪೨ | ಕಚ್ಚು |
| ಕಪ್ಪಡ | ೭-೫೧<br>೬-೪ | ಸಂ.-ಕರ್ಪಟ; ಬಟ್ಟೆ |
| ಕಮಠ | ೧-೮ | ಆಮೆ |
| ಕರಕರಿಸು | ೮-೨೨ | ಹಿಂಸಿಸು |
| ಕರಣ | ೬-೧೬ | ಇಂದ್ರಿಯ |
| ಕರ್ದುಕು | ೬-೩ | ಕಚ್ಚು |
| ಕಲಿ | ೪-೫<br>೭-೩೧ | ಶೂರ |
| ಕಳನು | ೧-೧೧ | ಯುದ್ಧರಂಗ |
| ಕಳವಳಿಗೆಯರ್ | ೪-೨ | ಸೀಳು (?) |
| ಕಾಣುಹ | ೪-೨೫ | ಕಾಣುವುದು |
| ಕಾಯ್ಪು | ೧-೧೨ | ಕೋಪ |
| ಕಾಹು | ೩-೨೮<br>೬-೪ | ಕಾವಲು |
| ಕಾಹೊನಲ್ | ೭-೨೮ | ಹ.ಗ.-ಕಾಳ್ಪೊನಲ್; ಅಡವಿಯ ಪ್ರವಾಹ |
| ಕಾಳ | ೮-೧೬ | ಕತ್ತಲೆ |
| ಕಾಳಿಜ | ೮-೨೫<br>೭-೪೩ | ಹೃದಯಪಿಂಡ |
| ಕಾಳುಗೆಡೆ | ೪-೪೦ | ಕೆಟ್ಟಮಾತಾಡು |
| ಕಾಳೋರಗ | ೮-೩೩ | ಕರಿನಾಗರಹಾವು |
| ಕಾಳ್ಗೆಡೆ | ೫-೨೭ | ಕೆಟ್ಟಮಾತಾಡು |
| ಕಿಗ್ಗಾಳಿ | ೩-೨೧ | (?) |
| ಕಿಚ್ಚು | ೩-೨೯ | ಬೆಂಕಿ |
| ಕೀನಾಶ | ೯-೧೮ | ಯಮ |
| ಕುತ್ತ | ೭-೩೭ | ರೋಗ |
| ಕುತ್ತು | ೫-೨೯ | ಬಾಗು, ಬಗ್ಗಿಸು |

| | | |
|---|---|---|
| ಕುತ್ತುಱು | ೬-೨<br>೭-೪ | ಪೊದರು |
| ಕುಮುದ | ೩-೧೭ | ನೈದಿಲೆ |
| ಕುಸುಕು | ೮-೫೬ | ಕುಕ್ಕು |
| ಕೂಗಿಡಿಸು | ೪-೮ | ಅರಿಚಿಕೊಳ್ಳುವಂತೆ ಮಾಡು |
| ಕೆಡೆ | ೪-೭ | ಬೀಳು |
| ಕೆಡೆನುಡಿ | ೨-೮ | ನಿಂದಿಸು |
| ಕೆಡೆಹೊಯ್ | ೭-೨೮ | ನೆಲಕ್ಕೆ ಬೀಳುವಂತೆ ಹೊಡೆ |
| ಕೆರಳ್ | ೪-೧೦ | ಕೋಪಗೊಳ್ಳು, ರೇಗು |
| ಕೈಗೆಯ್ | ೧-೧೦<br>೫-೩೭ | ಅಲಂಕರಿಸು |
| ಕೈದು | ೬-೨ | ಆಯುಧ |
| ಕೈಯೊಡನೆ | ೯-೫ | ಸಂಗಡವೇ |
| ಕೈರವ | ೪-೧೪ | ನೈದಿಲೆ |
| ಕೈಸಾರು | ೭-೪೧ | ಕೈಗೆ ಬರು, ಸ್ವಾಧೀನವಾಗು |
| ಕೈಹೊಡೆ | ೪-೯ | ಬಿಲ್ಲುಗಾರರು ಕೈಗೆ ಕಟ್ಟಿಕೊಳ್ಳುವ [ಚರ್ಮ |
| ಕೊಕ್ಕರಿಸು | ೭-೪೪ | ಅಸಹ್ಯಪಡು |
| ಕೊಪ್ಪು | ೪-೯ | ಬಿಲ್ಲಿನ ಕೊನೆ |
| ಕೊಱಚಾಡು | ೫-೨ | ನಿಂದಿಸು, ಮರ್ಮಭೇದಕವಾದ ಮಾತನ್ನಾಡು |
| ಕೊಸರು | ೭-೪೮ | ಕೂಗು |
| ಕೋ | ೪-೧೨ | ಪೋಣಿಸು |
| ಕೋಟಲೆ | ೫-೩೫ | ತೊಂದರೆ |
| ಕೋಡಿಸು | ೪-೨೦ | ಕುಗ್ಗಿಸು, ಭಯಪಡಿಸು |
| ಕೋಡು | ೫-೧೨ | ಕುಗ್ಗು ; ಕೊಂಬು |
| ಕೋದಂಡ | ೯-೧೦ | ಬಿಲ್ಲು |
| ಕೋರಡಿಗ | ೫-೧೧ | ಹಿಂಸಕ |
| ಕೋಶ | ೬-೧೬ | ಬೊಕ್ಕಸ |
| ಕೋಳ್ಗಸಱು | ೮-೨೫ | ಕೊಚ್ಚೆ |
| ಕೌಱು | ೭-೫೦ | ದುರ್ವಾಸನೆ |
| ಕಂಕರಿಗೋಲು | ೭-೪೮ | ದೊಡ್ಡ ಚಾಟಿ |
| ಕಂಟಣಿಸು | ೩-೨೩ | ಹಿಂಜಗಿ, ಹಾರು |
| ಕುಂದು | ೭-೩೭ | ನ್ಯೂನತೆ |
| ಕೊಂಡೆಯ | ೨-೧೮ | ಚಾಡಿ, ಕುತ್ಸಿತ |

## ಖ

| | | |
|---|---|---|
| ಖಗ | ೭-೨೯ | ಸೂರ್ಯ |

## ಗ

| | | |
|---|---|---|
| ಗಡಣ | ೩-೧೬ | ಸಮೂಹ |
| ಗನ್ನ | ೩-೩೭ | ಮೋಸ |
| ಗನ್ನಗತಕ | ೯-೮ | ,, |
| ಗರವಟಿಕೆ | ೩-೨೮ | ಗದ್ದಲ (?) |
| ಗರಳಗೊರಳವ | ೪-೧೦ | ಶಿವ |
| ಗರುವಿಕೆ | ೪-೪೨ | ಗೌರವ |
| ಗರ್ತ | ೧-೮ | ಸುಳಿ |
| ಗಸಣಿ | ೩-೩೬ | ತೊಂದರೆ, ತಿಕ್ಕಾಟ |
| ಗಾಡಿ | ೩-೩೮ | ಸೌಂದರ್ಯ |
| ಗಾಡಿಕಾತಿ | ೫-೮ | ಸುಂದರಿ |
| ಗಾಣ | ೪-೨೮ | ಸಂ.-ಗಾನ |
| ಗಾವದಿ | ೭-೪೪ | ಮೂಢ (?) |
| ಗಾಸಿ | ೨-೧೭ | ತೊಂದರೆ |
| ಗುಬ್ಬುವಿಕ್ಕಿಸು | ೪-೬ | ಭಯಪಡಿಸು |
| ಗೇಹ | ೭-೨೮ | ಮನೆ |
| ಗೊಡ್ಡಾಟ | ೯-೮ | ಕಾಟ, ಕಿತ್ತಾಟ |
| ಗೋರಿವೇಂಟೆ | ೩-೨೧ | ಉಪಾಯದಿಂದ ಮೃಗಗಳನ್ನು ಹಿಡಿಯುವುದು |
| ಗಂಡ | ೪-೪ | ಪರಾಕ್ರಮಿ |

## ಘ

| | | |
|---|---|---|
| ಘುಲ್ಲಣೆ | ೮-೫೧ | ಘಾಸಿ |
| ಘೂಕ | ೮-೧೩ | ಗೂಬೆ |
| ಘೂರ್ಮಿಸು | ೪-೮ | ಗುರುಗುಟ್ಟು |
| ಘೋಷಣೆ | ೫-೨೧ | ಬಿರುದು ಹೊಗಳುವಿಕೆ |

## ಚ

| | | |
|---|---|---|
| ಚಚ್ಚರ | ೫-೨೨ | ಬೇಗ |
| ಚಮ್ಮಟಿಗೆ | ೪-೪೪ | ಸಂ.-ಚರ್ಮಪಟ್ಟಿಕಾ; ಚಾವಟಿ |

| | | |
|---|---|---|
| ಚಾಂದ್ರಾಯಣ | ೯-೧೩ | ಒಂದು ವ್ರತ |
| ಚಿತ್ರಕಾಯ | ೩-೨೬ | ಹುಲಿ; ಚಿರತೆ |
| ಚೋದ್ಯ | ೩-೩೭ | ಆಶ್ಚರ್ಯ |
| ಚಂಚು | ೬-೩ | ಕೊಕ್ಕು |

## ಜ

| | | |
|---|---|---|
| ಜಗವರ್ತಿ | ೮-೫೪ | ದೊಡ್ಡ ಉರಿ |
| ಜಜ್ಝಾರ | ೩-೧೬ | ವೀರ |
| ಜಡಿ | ೭-೫೧ | ತರ್ಜಿಸು, ಗದರಿಸು |
| ,, | ೯-೨ | ಝುಳಪಿಸು |
| ಜತ್ತಕ | ೫-೨೯ | ಹಿಂಸಕ |
| ಜರಿ | ೩-೧೫ | ಕೀಲುತಪ್ಪು |
| ಜವಗುಂದು | ೮-೫ | ಶಕ್ತಿಗುಂದು |
| ಜಳಕಿಸು | ೪-೨೦ | ನಡುಗಿಸು |
| ಜಳೂಕ | ೧-೮ | ಜಿಗುಳೆ |
| ಜಳೋದರ | ೨-೮ | ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ರೋಗ |
| ಜಾಲ | ೩-೧೪ | ಸಮೂಹ |
| ಜುಣುಗು | ೩-೨೧ | ಕುಗ್ಗು |
| ಜಂಗುಳಿ | ೭-೫೦ | ಸಮೂಹ, ಗುಂಪು |
| ಜಂಬುಕ | ೮-೧೩ | ನರಿ |

## ಝ

| | | |
|---|---|---|
| ಝುಂಕಿಸು | ೭-೩೩ | ಬಯ್, ಗದರಿಸು |

## ಠ

| | | |
|---|---|---|
| ಠಕ್ಕು | ೭-೧೦ | ಮೋಸ |
| ಠಾವು | ೩-೭ | ಸ್ಥಳ |

## ಡ

| | | |
|---|---|---|
| ಡಗೆ | ೪-೧೫ | ಸೆಕೆ, ಝಳ |
| ಡಾವರ | ೫-೩೩ | ಕೋಟಲೆ, ಹೊಡೆದಾಟ |

| | | |
|---|---|---|
| ಡಾಳಿಸು | ೬-೨ | ಬೀಸು |
| ಡಿಂಡೀರ | ೧-೮ | ನೊರೆ |
| ಡೆಂಡಣಿಸು | ೪-೨೪ | ಬೆಚ್ಚು, ತತ್ತರಿಸು |
| ಡೆಂಢಣಿಸು | ೩-೨೨ | |
| ಡೊಂಜು | ೩-೧೫ | ಡೊಗರು ; ತಗ್ಗು ಬಿದ್ದ ಸ್ಥಳ |

## ತ

| | | |
|---|---|---|
| ತಕ್ಕೈಸು | ೮-೨೮ | ತಕ್ಕೈಸು, ಆಲಿಂಗಿಸು |
| ತಗಹು | ೬-೨೩ | ಬಂಧನ |
| ತಣೆ | ೮-೫೦ | ತೃಪ್ತಿಹೊಂದು |
| ತಣಿವು | ೧-೧೬ | ತೃಪ್ತಿ |
| ತತ್ತುಕ | ೮-೮ | ಹುಡುಗ (?) |
| ತನಿಗಂಪು | ೪-೧೪ | ಸುಗಂಧ |
| ತರಹರಿಸು | ೭-೩೧ | ತತ್ತರಿಸು |
| ತಱಿಸಲ್ | ೩-೨೭ | ನಿಶ್ಚಯಿಸು |
| ತಲ್ಲಣಿಸು | ೮-೪ | ತಳಮಳಿಸು |
| ತವಗ | ೭-೫೨, ೧-೧೦, ೮-೫೬ | ಸಂ.-ತಮುಂಗ ; ಉಚ್ಚಾಸನ |
| ತವಿಲ್ | ೪-೩೨ | ನಾಶ |
| ತಳಪಟ | ೩-೧೦ | ಬಯಲು |
| ತಳಿತ | ೯-೯ | ಹ.ಗ.-ತಳ್ತ ; ಹೊಂದಿದ |
| ತಳಿರ್ | ೩-೩೧ | ಚಿಗುರು |
| ತಳುವು | ೮-೯, ೭-೧೮ | ತಡಮಾಡು |
| ತಾಣ | ೧-೨ | ಸ್ಥಾನ |
| ತಾಂಗು | ೨-೧೯ | ತಡೆದುಕೊ |
| ತಿಣ್ಣ | ೫-೬ | ಭಾರ |
| ತಿದಿ | ೮-೫೧ | ಚರ್ಮ |
| ತಿನ್ | ೮-೧೧ | ಕಚ್ಚು |
| ತಿನಿಹಿ | ೩-೧೬ | ತಿನ್ನುವ ಸ್ವಭಾವವುಳ್ಳುದು |
| ತಿಮಿರ | ೯-೧ | ಕತ್ತಲೆ |
| ತಿರುಳ್ | ೪-೧೦ | ಸಾರ |

| | | |
|---|---|---|
| ತಿಂತಿಣಿ | ೮-೧ | ಸಮೂಹ |
| ತುಡುಕು | ೪-೪೫<br>೭-೪ | ಹಿಡಿ, ಮುಟ್ಟು |
| ತೂಪಿಱು | ೩-೯ | ಉಃಪೆಂದು ಊದು |
| ತೆಕ್ಕು | ೫-೨೯<br>೫-೩೩ | ದಿಕ್ಕುಗೆಡು |
| ತೆರಳಿಕೆ | ೪-೧೦ | ಸಮೂಹ |
| ತೆಱಕಾಱ | ೫-೩೦ | ಹಣವನ್ನು ವಸೂಲು ಮಾಡುವವನು |
| ತೆಱೆ | ೭-೪೭ | ಸುಂಕ |
| ತೊಡರ್ | ೧-೧೫ | ಪ್ರತಿಭಟಿಸು |
| ತೊಡಿಗೆ | ೧-೭ | ಆಭರಣ |
| ತೊನೆ | ೪-೨೪ | ತೂಗು |
| ತೊರಳೆ | ೪-೧೦ | ಗುಲ್ಮ; ದೇಹದ ಒಂದು ಭಾಗ |
| ತೊಳಲು | ೭-೨೨ | ಸುತ್ತಾಡು |
| ತೊಂಗಲ್ | ೩-೩೧ | ಗೊಂಚಲು |
| ತೋಱೆತ್ತು | ೩-೨೧ | ಬೇಟೆಯಲ್ಲಿ ಕ್ರೂರಮೃಗವನ್ನು ಆಕರ್ಷಿಸಲು ಕಟ್ಟುವ ಎತ್ತು |
| ತೋಹು | ೩-೨೩ | ಮೋಸ, ಉಪಾಯ |

## ದ

| | | |
|---|---|---|
| ದಟ್ಟಿಸು | ೫-೭ | ಬೆದರಿಸು |
| ದಟ್ಟೈಸು | ೮-೧೬ | ದಟ್ಟವಾಗು |
| ದಡದಡಿಸು | ೭-೩೧ | ನಡುಗು |
| ದಮೆ | ೨-೧೫ | ಇಂದ್ರಿಯ ನಿಗ್ರಹ |
| ದವ | ೧-೧೧ | ಕಾಡು ಕಿಚ್ಚು |
| ದಳೆ | ೪-೧೨ | ಹೊಲಿ |
| ದಂಡಿಗೆ | ೪-೨೮ | ವೀಣೆ |
| ದಾಳಿಕ್ಕು | ೩-೧೮ | ದಾಳಿಯಿಡು, ಮುತ್ತು |
| ದಿವಸ್ಪತಿ | ೧-೧ | ಸೂರ್ಯ |
| ದೀಹ | ೩-೨೨<br>೫-೩೭ | ಬೇಟೆಗಾಗಿ ತಯಾರಿಸಿದ ಪ್ರಾಣಿ |
| ದೂಪೆ | ೮-೫೫ | ಸಂ.-ಧೂಮ; ಹೊಗೆ |
| ದೇಸಿಗ | ೬-೪ | ಮನೆಬಾಗಿಲು ಇಲ್ಲದ ಪರದೇಶಿ |

## ಧ

| | | |
|---|---|---|
| ಧೃತಿ | ೬-೨೦ | ಧೈರ್ಯ |
| ಧಾವತಿ | ೬-೨೫<br>೮-೩೭ | ಕಷ್ಟ, ಆಯಾಸ |
| ಧೀ | ೨-೭ | ಬುದ್ಧಿ |
| ಧೀವರ | ೩-೫ | ಬೆಸ್ತ (ಇಲ್ಲಿ, ಬೇಟೆಗಾರ) |
| ಧುರ | ೪-೨೦ | ಯುದ್ಧ |

## ನ

| | | |
|---|---|---|
| ನಕುಲ | ೩-೧೦ | ಮುಂಗುಸಿ |
| ನಕ್ರ | ೧-೮ | ಮೊಸಳೆ |
| ನನ್ನಿ | ೩-೩೭ | ಸತ್ಯ |
| ನನ್ನಿಕಾಱ | ೭-೪೧<br>೮-೨೪ | ಸತ್ಯವಂತ |
| ನಮ್ಮಾವು (?) | ೩-೧೧ | ('ಅಮ್ಮಾವು' ನೋಡಿ) |
| ನಲವು | ೩-೩೧ | ಸಂತೋಷ |
| ನಲಿ | ೪-೧೭ | ಸಂತೋಷಪಡು |
| ನಸುನನೆ | ೬-೩ | ನಸುಗುನ್ನಿ |
| ನಳನಳಿಸಿ | ೩-೩೧ | ಕೋಮಲವಾಗಿ |
| ನಾರಂದ | ೨-೧೩ | ನಾರದ |
| ನಾರಾಚ | ೮-೧೦ | ಬಾಣ |
| ನಾಳಲ್ | ೪-೨ | ಲಾಳದ ಕಡ್ಡಿ |
| ನಿಕಾಯ | ೯-೧೩ | ಸಮೂಹ |
| ನಿಗ್ರಹ | ೬-೨೪<br>೯-೧೧ | ಪೀಡೆ, ಹಿಂಸೆ |
| ನಿಮಿರ್ | ೩-೨೨ | ನೆಟ್ಟಗಾಗು |
| ನಿರುತ | ೪-೨೦ | ನಿಜ, ಸತ್ಯ |
| ನಿರೋಧ | ೨-೧೨<br>೬-೯ | ಪ್ರತಿಬಂಧಕ, ತಡೆ |
| ನಿರ್ಘಾತನ | ೪-೫ | ಬಲವಾಗಿ ಹೊಡೆಯುವುದು |
| ನೀಱೆ | ೬-೨೬ | ಸುಂದರಿ |
| ನೀಹಾರ | ೧-೮ | ಮಂಜು |
| ನುಲಿ | ೭-೪೨ | ಹಗ್ಗ |
| ನೆರವು | ೭-೧ | ಸಹಾಯ |

| | | |
|---|---|---|
| ನೆರೆ | ೩-೧೭ | ಗುಂಪು ಸೇರು |
| ನೆಱೆ | ೪-೩೯ | ಸಂಪೂರ್ಣವಾಗಿ |
| ನೆಲದೆಱೆ | ೭-೪೭ | ನೆಲ+ತೆಱೆ; ನೆಲಕ್ಕಾಗಿ ಕೊಡಬೇಕಾದ ಸುಂಕ |
| ನೇಸಱು | ೬-೧೨ | ಸೂರ್ಯ |
| ನೇಹ | ೮-೫೬ | ಸಂ.-ಸ್ನೇಹ; ಪ್ರೀತಿ |

## ಪ

| | | |
|---|---|---|
| ಪಟಲ | ೯-೧ | ಸಮೂಹ |
| ಪಟವೇಂಟೆ | ೩-೨೩ | (?) |
| ಪಡಲಿಡು | ೮-೨೫ | ಚಲ್ಲಾಪಿಲ್ಲಿಯಾಗಿ ಬೀಳು |
| ಪಡಿ | ೭-೪೫ | ಸಂ.-ಪ್ರತಿ |
| ಪಡೆ | ೪-೬, ೭ | ಸೈನ್ಯ |
| ಪರಿಕರ | ೪-೧ | ಸುತ್ತುಮುತ್ತಿನವರು |
| ಪರಿಣಾಮ | ೭-೧೭<br>೬-೧೧ | ನಿಸ್ತಾರ |
| ಪರುಷ | ೨-೧ | ಸ್ಪರ್ಶಶಿಲೆ (ಇದಕ್ಕೆ ಮುಟ್ಟಿಸಿದ ಲೋಹವು ಚಿನ್ನವಾಗುತ್ತದೆ) |
| ಪರ್ವ | ೨-೨ | ಹಬ್ಬ |
| ಪಱಿ | ೪-೫ | ಕತ್ತರಿಸು |
| ಪವಿಧರ | ೯-೨೧ | ಇಂದ್ರ |
| ಪಶುಪತಿ | ೩-೩೧ | ಶಿವ |
| ಪಸಾಯ | ೪-೨೯ | ಉಡುಗೊರೆ |
| ಪಳಹರ ವೇಂಟೆ | ೩-೨೩ | (?) |
| ಪಂಚಾಸ್ಯ | ೧-೧೨ | ಸಿಂಹ |
| ಪಂಥ | ೭-೪೭ | ಮಾರ್ಗ |
| ಪಾಠೀನ | ೧-೮ | ಒಂದು ಜಾತಿಯ ಮೀನು |
| ಪಾಡು | ೬-೯ | ಸ್ಥಿತಿ |
| ಪಾರದಿ | ೩-೩೯ | ಬೇಟೆ |
| ಪಿಕ | ೬-೩ | ಕೋಗಿಲೆ |
| ಪಿಸುಣತ್ವ | ೩-೩೬ | ಚಾಡಿಕೋರತನ |
| ಪೀಳಿಗೆ | ೧-೧೦ | ವಂಶ |
| ಪುರವೈರಿ | ೩-೩೦ | ಶಿವ |
| ಪುಳಕ | ೩-೩೮ | ರೋಮಾಂಚ |

| | | |
|---|---|---|
| ಪುಳಿನ | ೩-೩೧ | ಮರಳುದಿಣ್ಣೆ |
| ಪುಳಿಂದ | ೪-೨ | ಬೇಡ |
| ಪೊಗಳ್ | ೮-೧<br>೮-೫ | ಹೊಗಳು, ವರ್ಣಿಸು |
| ಪೊಡಮಡು | ೪-೨೮ | ನಮಸ್ಕಾರಮಾಡು |
| ಪೊನಲ್ | ೪-೪೫ | ಪ್ರವಾಹ |
| ಪ್ರಕರ | ೬-೧೦ | ಸಮೂಹ |
| ಪ್ರತಿಗ್ರಹ | ೫-೩೯ | ದಾನ ತೆಗೆದುಕೊಳ್ಳುವುದು |
| ಪ್ರೇತವನ | ೪-೩೮ | ಶ್ಮಶಾನ |

## ಫ

| | | |
|---|---|---|
| ಫಣಿ | ೮-೮ | ಹಾವು |

## ಬ

| | | |
|---|---|---|
| ಬಗೆ | ೩-೩೪ | ಮನಸ್ಸು |
| ,, | ೪-೨೨ | ಆಲೋಚಿಸು |
| ,, | ೭-೧೦ | ಲಕ್ಷ್ಯಮಾಡು |
| ಬಟ್ಟೆ | ೧-೧೫ | ದಾರಿ |
| ಬತ್ತಾಯ | ೭-೨೫ | ಭತ್ಯ |
| ಬನ್ನ | ೩-೩೭ | ಭಂಗ |
| ಬಯ್ಚಿಡು | ೨-೭ | ಬಚ್ಚಿಡು |
| ಬಱಿತ | ೬-೯ | ಆರಿದ, ಒಣಗಿದ |
| ಬಲಗೊಳ್ | ೭-೧೬ | ಪ್ರದಕ್ಷಿಣೆಮಾಡು |
| ಬಲವರು | ೪-೨ | ಬಳಸಿಬರು |
| ಬಲಿ | ೩-೩೨ | ಪುಷ್ಟಿಹೊಂದು |
| ಬಲ್ಲಹ | ೩-೧೩ | ಸಂ.-ವಲ್ಲಭ; ಒಡೆಯ |
| ಬವರಿದಿರುಗು | ೪-೨ | ಗುಂಡಗೆ ಸುತ್ತು |
| ಬಸವಳಿ | ೪-೧೯ | ಶಕ್ತಿಗುಂದು |
| ಬಸುಱು | ೩-೧೮ | ಹೊಟ್ಟೆ |
| ಬಳಿ | ೩-೩೦ | ದಾರಿ |
| ಬಳಿಚು | ೪-೧೧ | ಬಿಡು |
| ಬಾಣಸ | ೮-೧ | ಅಡಿಗೆಯ ಮನೆ |
| ಬಾದಣ | ೩-೧೫ | ಸಂದು, ತೂತು |

| | | |
|---|---|---|
| ಬಾರಿ | ೭-೩೧ | ಬಾರು, ತೊಗಲಿನ ಪಟ್ಟಿ |
| ಬಿಗುಹು | ೪-೩ | ಬಿಗಿ |
| ಬಿಡು | ೪-೧೪ | ಬೀಡುಬಿಡು |
| ಬಿತ್ತು | ೩-೧೩ | ಬೀಜ |
| ಬಿದ್ದ | ೪-೯ | ಔತನ |
| ಬಿನದ | ೩-೨೫ | ಸಂ.-ವಿನೋದ |
| ಬಿಱುಬು | ೫-೧೧ | ಕಾಠಿನ್ಯ |
| ಬಿಱುಮುಂದಿ | ೪-೨ | ಕಠಿನವಾದ ದೇಹವುಳ್ಳ ವ್ಯಕ್ತಿ |
| ಬಿಸರುಹ | ೫-೭ | ಕಮಲ |
| ಬೀ | ೪-೨೫ | ನಾಶವಾಗು |
| ಬೀದಿವರಿ | ೪-೨ | ಸ್ವೇಚ್ಛೆಯಾಗಿ ಓಡು |
| ಬೀಯ | ೨-೧ | ಬಳಸುವ ವಸ್ತು |
| ಬೀವು | ೭-೪೨ | ನರ |
| ಬೆಬ್ಬಳಿಸು | ೪-೧೯ | ಗಾಬರಿಯಾಗು |
| ಬೆಸ | ೭-೨೩ | ಆಜ್ಞೆ |
| ಬೆಸಕೈ | ೬-೫ | ಸೇವಿಸು |
| ಬೇಹಾಗ | ೩-೬ | ಬೇಕಾದಾಗ |
| ಬೇಳ್ | ೨-೮ | ಹೋಮಮಾಡು |
| ಬೈಗು | ೭-೨೪ | ಸಾಯಂಕಾಲ |
| ಬೆಂಬಡಿಗೆ | ೩-೨೯ | ಬೆನ್ನಿನ ಮೇಲೆ ಹೊಡೆಯುವ ದೊಣ್ಣೆ |
| ಬೆಂಗೊಡು | ೫-೩೬ | ಸೋಲು |
| ಬೊಂಬುಳಿ | ೮-೪೮ | ಒಂದು ಬಗೆಯ ತಮಟೆ |
| ಬೋಸರಿಸು | ೨-೧೮ | ಪ್ರೇರಿಸು |
| ಬೋಳೈಸು | ೩-೩೪ | ಸಮಾಧಾನಪಡಿಸು |

## ಭ

| | | |
|---|---|---|
| ಭಲ್ಲುಕ | ೮-೧೩ | ಕರಡಿ |
| ಭವ | ೨-೧೪ | ಜನ್ಮ |
| ಭವಿ | ೧-೬ | ವೀರಶೈವನಲ್ಲದವನು |
| ಭಾಳ | ೯-೧೪ | ಹಣೆ |

## ಮ

| | | |
|---|---|---|
| ಮಡಲಿಱು | ೪-೯, ೮-೧೬ | ಹಬ್ಬು |

| | | |
|---|---|---|
| ಮದ್ದು | ೭-೩೭ | ಔಷಧ |
| ಮನ್ನೆಯ | ೪-೪ | ಸಂ.-ಮಾನ್ಯ; ನಾಯಕ |
| ಮರಚು | ೩-೧೯ | ಹ. ಗ.-ಮರಳ್ಚು; ಹಿಂದಿರುಗಿಸು |
| ಮರವಡು | ೩-೨೫ | ನಿಶ್ಚೇಷ್ಟವಾಗು |
| ಮರುತ ಮಿತ್ರ | ೩-೨೬ | ವಾಯುವಿನ ಸ್ನೇಹಿತ, ಅಗ್ನಿ |
| ಮರುಳ | ೪-೩೪ | ಹುಚ್ಚ |
| ಮರೆ | ೩-೨೦ | ಒಂದು ಜಾತಿಯ ಜಿಂಕೆ |
| ಮಱುಮೊನೆ | ೪-೨೪ | ಮತ್ತೊಂದು ತುದಿ |
| ಮಲೆ | ೩-೨೯ | ಗರ್ವಿಸು |
| ಮಲ್ಲಾಮಲ್ಲಿ | ೭-೫೦<br>೮-ರಗಳೆ | ನೂಕುನುಗ್ಗಲು |
| ಮಸಕ | ೭-೧೮ | ವಿಜೃಂಭಣೆ |
| ಮಸಗು | ೬-೧೮ | ವಿಜೃಂಭಿಸು |
| ಮಾಡ | ೮-೧ | ಮಹಡಿ ಮನೆ |
| ಮಾಣ್ | ೧-೬ | ಬಿಡು |
| ಮಾದು | ೬-೫ | ಹ.ಗ. - ಮಾಣ್ದು; ತಪ್ಪಿ |
| ಮಾರಿ | ೮-೧, ೨, ೧೦ | ಒಂದು ದೇವತೆ; ತೊಂದರೆ, ಹಿಂಸೆ |
| ಮಾಱುದ್ದ | ೪-೯ | ಒಂದಕ್ಕೊಂದಕ್ಕೆ ಉಜ್ಜು |
| ಮಾರ್ತಾಂಡ | ೩-೧೭ | ಸೂರ್ಯ |
| ಮಾರ್ಪೊಳೆ | ೭-೧೬ | ಪ್ರತಿಬಿಂಬಿಸು |
| ಮಿಡಿ | ೩-೬ | ಬೆರಳ ಮೇಲಿಟ್ಟು ಹಾರಿಸು |
| ಮಿಡುಕು | ೪-೧೯ | ಅಲ್ಲಾಡು, ಚಲಿಸು |
| ಮಿತ್ತು | ೩-೧ | ಸಂ.-ಮೃತ್ಯು |
| ಮಿತ್ರ | ೩-೨೬ | ಸೂರ್ಯ, ಸ್ನೇಹಿತ |
| ಮಿಸುಗು | ೪-೧೨ | ಹೊಳೆ, ಚಲಿಸು |
| ಮಿಳ್ಳಿಸು | ೪-೮ | ಅಲುಗಾಡು |
| ಮೀಹ | ೪-೩೮ | ಸ್ನಾನ |
| ಮುಕ್ಕುಱುಕ್ಕು | ೪-೨ | ಮುತ್ತು, ಮುಸುರು |
| ಮುಗಿಲ್ | ೭-೧೬ | ಮೋಡ, ಆಕಾಶ |
| ಮುಗುದ | ೬-೧೪ | ಸಂ.-ಮುಗ್ಧ; ಏನೂ ತಿಳಿಯದವನು |
| ಮುಟ್ಟಿಗೆ | ೮-೨೭<br>೮-೩೦ | ಚಿತಿ (?) |
| ಮುಡಿ | ೪-೩೯ | ಕೂದಲಿನ ಗಂಟು |
| ಮುಡಿಹ | ೪-೩೮ | ಮುಡಿಯುವುದು |

| | | |
|---|---|---|
| ಮುಪ್ಪುರಿ | ೨-೫ | ಮೂರು ಹುರಿ |
| ಮುರುಟು | ೮-೮ | ಕುಗ್ಗು |
| ಮೂಗುವಡು | ೭-೨೦ | ಮೂಕನಾಗು |
| ಮೂಡಿಗೆ | ೪-೯ | ಬತ್ತಳಿಕೆ |
| ಮೂರಿ | ೮-೧ | ಸಮೂಹ |
| ಮೃಗನಾಭಿ | ೪-೩೭ | ಕಸ್ತೂರಿಯ ಮೃಗ |
| ಮೆಯ್ಯಿಕ್ಕು | ೭-೭ | ನಮಸ್ಕಾರಮಾಡು |
| ಮೇಗಾಳಿ | ೩-೨೧ | (?) |
| ಮೇಖಲೆ | ೪-೧೨ | ಉಡಿದಾರ |
| ಮೊಗೆ | ೨-೧೯ | ತುಂಬು (ಇಲ್ಲಿ, ನುಂಗು) |
| ಮೊಟ್ಟೆಗೂಳ್ | ೪-೩ | ಮೊಟ್ಟೆ+ಕೂಳ್; ಮೊಟ್ಟೆಯಲ್ಲಿ ಕಟ್ಟಿದ ಬುತ್ತಿ |
| ಮೋದು | ೩-೨೫ | ಹೊಡೆ, ಸದೆಬಡಿ |
| ಮೋಹರ | ೯-೩ | ಗುಂಪು |
| ಮೋಹು | ೯-೨ | ಮುಟ್ಟಿಸು |
| ಮಂಡಿತ | ೪-೧೮ | ಅಲಂಕೃತವಾದ |
| ಮೌಂಜಿ | ೪-೧೨ | ನೊದೆ ಹುಲ್ಲಿನ ಹುರಿ |

## ಯ

| | | |
|---|---|---|
| ಯಕ್ಷಕರ್ದಮ | ೩-೩೮ | ಪಚ್ಚಕರ್ಪೂರ, ಕಸ್ತೂರಿ ಮೊದಲಾದುವುಗಳಿಂದ ಮಾಡಿದ ಸುಗಂಧ ದ್ರವ್ಯ |

## ರ

| | | |
|---|---|---|
| ರತ್ನಾಕರ | ೧-೧೨ | ಸಮುದ್ರ |
| ರಾಗ | ೬-೪<br>೯-೧ | ಕಾಂತಿ, ಸಂತೋಷ |
| ರುಚಿರ | ೧-೯ | ಮನೋಹರ |
| ರುಜೆ | ೪-೩೦ | ರೋಗ |
| ರುದ್ರಭೂಮಿ | ೭-೪೯ | ಶ್ಮಶಾನ |
| ರುಧಿರ | ೪-೪೪ | ರಕ್ತ |

## ಱ

| | | |
|---|---|---|
| ಱೋಡಾಡು | ೨-೨೧ | ಹಾಸ್ಯಮಾಡು |

## ಲ

| | | |
|---|---|---|
| ಲಲಾಮ | ೫-೧೮ | ಭೂಷಣ, ಶ್ರೇಷ್ಠ |
| ಲಲ್ಲೆಗಱೆ | ೭-೭ | ಮುದ್ದಿಸು |
| ಲಾಗು | ೭-೨೩, ೨೪ | ಸಂ.-ಲಾಘವ(?) ; ಸುಲಭ |
| ಲುಬ್ಧಕ | ೩-೨೦<br>೪-೮ | ಬೇಡ |
| ಲೇಸು | ೧-೫ | ಸರಿ, ಒಳ್ಳೆಯದು |

## ವ

| | | |
|---|---|---|
| ವಡಬ | ೫-೧ | ಸಮುದ್ರದ ಬೆಂಕಿ |
| ವಲ್ಕಲ | ೩-೩೨ | ನಾರುಬಟ್ಟೆ |
| ವಸುಮತಿ | ೪-೩೬ | ಭೂಮಿ |
| ವಿದ್ರುಮ | ೧-೮ | ಹವಳ |
| ವಿಮಾನ | ೭-೫೨ | ಶವವನ್ನು ಸಾಗಿಸುವ ಮಂಟಪ |
| ವಿಶ್ವಾಸ | ೩-೩ | ನಂಬಿಕೆ |
| ವಿಸರ | ೬-೩ | ಸಮೂಹ |
| ವೃಕ | ೮-೧೩ | ತೋಳ |
| ವ್ರಜ | ೩-೨೯ | ಸಮೂಹ |
| ವ್ರಾತ | ೩-೩೨ | ಸಮೂಹ |

## ಶ

| | | |
|---|---|---|
| ಶಮೆ | ೨-೧೫ | ಮನೋನಿಗ್ರಹ |
| ಶಾಡ್ವಲ | ೪-೧೫ | ಹಸುರು ಹುಲ್ಲು |
| ಶಿಶಿರೋಪಚಾರ | ೪-೧೫ | ಶೈತ್ಯೋಪಚಾರ |
| ಶೀಕರ | ೧-೮ | ತುಂತುರು ಹನಿ |
| ಶೇಷೆ | ೩-೩ | ಅಕ್ಷತೆ |
| ಶಿಂಶುಮಾರ | ೧-೮ | ಮೊಸಳೆ |
| ಶೈವಾಳ | ೧-೮ | ಪಾಚಿ |

## ಸ

| | | |
|---|---|---|
| ಸತ್ತಿಗೆ | ೪-೩೧ | ಛತ್ರಿ |
| ಸನಿಹ | ೭-೧೧ | ಸಮೀಪ |

| | | |
|---|---|---|
| ಸಬಳ | ೮-೫೪ | ಭರ್ಜಿ |
| ಸವೆ | ೬-೨೭ | ಸವೆದುಹೋಗು, ಕಡಮೆಯಾಗು |
| ಸರ | ೪-೨೪ | ಸಂ.-ಸ್ವರ |
| ಸರಳ್ | ೪-೧೦ | ಬಾಣ |
| ಸರಳಿಸು | ೩-೨೦, ೨೨ | ಹಾರು, ದಾಟು |
| ಸರಿತ್ಪತಿ | ೧-೧ | ಸಮುದ್ರ |
| ಸವಕಟ್ಟು | ೩-೨೬ | ಏರ್ಪಡಿಸು |
| ಸವುಡಿ | ೭-೨೭ | (?) |
| ಸಾಗಿಸು | ೪-೩೪ | ಪೋಷಿಸು |
| ಸಾಗುದುರೆ | ೮-೪೨ | ಸಾಯುವ ಕುದುರೆ |
| ಸಾಮಾರ್ಥ | ೩-೧ | (?) |
| ಸಾರ್ | ೭-೧೩ | ಸೇರು |
| ಸಾರೆ | ೪-೭ | ಹತ್ತಿರ |
| ಸಾಲಭಂಜಿಕೆ | ೪-೨೭ | ಪುತ್ತಳಿ, ಗೊಂಬೆ |
| ಸಿಗ್ಗು | ೮-೩೬ | ನಾಚಿಕೆ |
| ಸಿದುಗು | ೮-೨೬ | ಬೆದಕು, ಆರಿಸು |
| ಸಿದ್ದಿಗೆ | ೭-೫೨ | ಚಟ್ಟ |
| ಸಿವುಡಿ | ೬-೧೧ | (?) |
| ಸೀಗುರಿ | ೬-೨ | ಒಂದು ತೆರದ ಚಾಮರ |
| ಸುಗಿ | ೪-೧೭ | ಹೆದರು |
| ಸುಧೆ | ೪-೧೬ | ಅಮೃತ |
| ಸುನಾಣೆಯ | ೬-೧೦ | ಒಳ್ಳೆಯ ನಾಣ್ಯ |
| ಸುಮಾನ | ೩-೩೫ | ಸಂತೋಷ |
| ಸುಮ್ಮಾನ | ೩-೧೭ | ಸಂತೋಷ |
| ಸುರೆ | ೨-೧೧ | ಮದ್ಯ |
| ಸುಂಕಿಸು | ೪-೧೨ | ಸುತ್ತುಗಟ್ಟು |
| ಸೂಡು | ೭-೧೭ | ಮುಡಿದುಕೊ |
| ಸೂನೆಗಾಱ | ೮-೧ | ಕಟುಕ |
| ಸೂಱುಳ್ | ೫-೩೦ | ಶಪಥ, ಆಣೆ |
| ಸೂಳ್ | ೨-೧೬<br>೮-೩ | ಸಲ, ಬಾರಿ |
| ಸೆಡೆ | ೭-೪೫ | ಭಯಪಡು |
| ಸೆರೆ | ೮-೧೦ | ರಕ್ತನಾಳ |
| ಸೈವೆಱಗಾಗು | ೨-೧೨ | ಬಹಳ ಆಶ್ಚರ್ಯಪಡು |

| | | |
|---|---|---|
| ಸೊರಹು | ೨-೬ | ಹರಟು, ಗಳಹು |
| ಸೋಹು | ೩-೨೩ | ಸೋವು, ಅಟ್ಟು |
| ಸಂಕ್ರಂದನ | ೫-೬ | ಇಂದ್ರ |
| ಸಂತವಿಡು | ೬-೧೬ | ಸಮಾಧಾನ ಪಡಿಸು |
| ಸಂತಾನ | ೬-೧೦ } | ಸಮೂಹ |
| ಸಂದೋಹ | ೬-೧೦ } | |
| ಸಂಬಳಿಗೋಲು | ೭-೩೧ | (?) |
| ಸಂವರಣೆ | ೮-೪ | ಸಮೂಹ |
| ಸ್ನಪನ | ೩-೩೮ | ಅಭಿಷೇಕ |
| ಸ್ವಧಾ | ೪-೧೩ | ಹೋಮಮಾಡುವಾಗ ಹೇಳುವ [ಮಾತು |
| ಸ್ವಾಹಾಪತಿ | ೧-೧ | ಅಗ್ನಿ |

## ಹ

| | | |
|---|---|---|
| ಹಗ್ಗಿ | ೫-೬ | ಸಂ.-ಅಗ್ನಿ; ಬೆಂಕಿ |
| ಹಡಪಿಗ | ೭-೩೦ | ಸಂಚಿಯವನು |
| ಹಡಿ | ೮-೨೧ | ಹ.ಗ.-ಪಡಿ; ಬಾಗಿಲು |
| ಹಣುಗು | ೩-೨೧, ೨೨ | ಹೊಂಚುಹಾಕು |
| ಹಣ್ಣುಜುವೆ | ೫-೨೪ | ಬಹಳ ಹಳೆಯದಾದ ಬಟ್ಟೆ |
| ಹದರು | ೮-೭ | ಕೈಯ ಮಣಿಕಟ್ಟು |
| ಹದುಳ | ೩-೧೩ | ಕ್ಷೇಮ |
| ಹನನ | ೯-೧೩ | ಕೊಲೆ |
| ಹರಕರಿಸು | ೩-೧೮ | ದೊಡ್ಡ ಗುಂಪಾಗು (?) |
| ಹರಣ | ೪-೨೨ | ಸಂ.-ಪ್ರಾಣ |
| ಹರಹು | ೩-೩೩ | ವಿಸ್ತರಿಸು, ಚಾಚು |
| ಹರಿ | ೩-೬ | ವೇಗವಾಗಿ ಹೋಗು |
| ಹರೆ | ೪-೩೨ | ಚೆದರು |
| ಹಱೆ | ೭-೪೮ | ತಮಟೆ |
| ಹಲ್ಲಣಿಸು | ೮-೫೧ | ಜೀನುಹಾಕು |
| ಹವಣು | ೫-೧೪ | ಸಂ.-ಪ್ರಮಾಣ; ಹದ |
| ಹಸರಿಸು | ೩-೨೧ | ಪ್ರಸರಿಸು |
| ಹಸಾದ | ೩-೬ | ಸಂ.-ಪ್ರಸಾದ |
| ಹಂಜರಿಸು | ೫-೫೨ | ಹಂದರಹಾಕು |
| ಹಂತಿ | ೮-೧ | ಸಂ.-ಪಂಕ್ತಿ |

| | | |
|---|---|---|
| ಹಂದೊಗಲು | ೭-೪೨ | ಹಸಿಯ ತೊಗಲು |
| ಹಾರಯಿಸು | ೩-೨೧ | ಅಪೇಕ್ಷಿಸು |
| ಹಾರು | ೭-೧<br>೮-೪೦ | ಹ. ಗ.-ಪಾರ್; ನಿರೀಕ್ಷಿಸು |
| ಹಾಸ | ೩-೨೧ | ಸಂ.-ಪಾಶ; ಕೊರಳ ಕಣ್ಣಿ |
| ಹಾಳು | ೮-೩೩ | ಭೂಮಿ, ಗದ್ದೆ, ದತ್ತಿ |
| ಹಿಣಿಲು | ೭-೪೩ | ಜಡೆ |
| ಹುಡುಕು ನೀರು | ೫-೧೦ | (?) |
| ಹುಯ್ಯಲು | ೩-೮ | ಮೊರೆ, ಆರ್ತನಾದ |
| ಹೆಗಲೆಣೆ | ೧-೧೪ | ಸಮಾನಸ್ಕಂಧ, ಸರಿಸಮಾನ |
| ಹೆಟ್ಟವೆಳಸು | ೫-೯ | (?) |
| ಹೆಡತಲೆ | ೯-೨ | ತಲೆಯ ಹಿಂಭಾಗ |
| ಹೆಪ್ಪಳಿಸು | ೨-೨೦ | ಹ. ಗ.-ಪೆಳ್ಪಳಿಸು, ಭಯಪಡು |
| ಹೆಂದದ | ೩-೨೭ | ಚಲಿಸದ, ಸ್ಥಿರವಾದ |
| ಹೇವರಿಸು | ೮-೩೮ | ಅಸಹ್ಯಪಡು, ಹಿಂದೆಗೆ |
| ಹೇಸು | ೯-೧೨ | ಜುಗುಪ್ಸೆಪಡು |
| ಹೊಗರು | ೪-೪೪ | ಕಾಂತಿ |
| ಹೊಡಕರಿಸು | ೮-೧೧ | ಪ್ರಜ್ವಲಿಸು (?) |
| ಹೊಡೆ | ೩-೧೦ | ತೆನೆ |
| ಹೊಡೆವಡು | ೬-೪ | ನಮಸ್ಕಾರಮಾಡು |
| ಹೊಣಕೆ | ೧-೧೪ | ಹ.ಗ.-ಪೊಣರ್ಕೆ; ಪ್ರತಿಸ್ಪರ್ಧಿ |
| ಹೊನಲಿಡು | ೮-೨೫ | ಪ್ರವಹಿಸು |
| ಹೊಯಿಕೈ | ೧-೧೪ | ಪ್ರತಿಸ್ಪರ್ಧಿ |
| ಹೊರಳಿ | ೪-೧೦ | ಸಮೂಹ, ಮೊತ್ತ |
| ಹೊಱೆಕಾಱ | ೭-೩೭ | ಭಾರವನ್ನು ಹೊರುವವನು |
| ಹೊಲಬು | ೮-೧೧ | ಮಾರ್ಗ |
| ಹೊಲ್ಲ | ೫-೩೪ | ಅಯೋಗ್ಯ, ಅನುಚಿತ |
| ಹೊಲ್ಲಹ | ೫-೩೦ | ನೀಚ, ಹೀನ |
| ಹೊಳಲು | ೫-೮ | ಪೊಟ್ಟರೆ |
| ಹೊಳ್ಳು | ೫-೮ | ನಿಸ್ಸಾರ |
| ಹೋರು | ೩-೧೫ | ಸಂದು, ತೂತು |

950—38. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

